## ಗ್ರಂಥಕರ್ತರಿಂದ ವಿರಚಿತವಾದ ಇತರ ಸಾಮಾಜಿಕ ನಾಟಕಗಳು :—

---

| | | | | |
|---|---|---|---|---|
| "ನವೀನಸಮಾಜ" | .... | .... | ಬೆಲೆ. ರೂ. | 0— 8—0 |
| "ವಿಧಿ" | .... | .... | ,, ,, | 0—12—0 |
| "ಗ್ರಹಚಾರ" ಅಥವಾ "ಮ್ಯಾನೇಜರ್ ಮುಕುಂದ್" | .... | | ,, ,, | 0—12—0 |

(ಮುದ್ರಣದಲ್ಲಿವೆ).

# ಲೋಭಿ

ಅಥವಾ

# ಕಾರ್ಪಣ್ಯ

ಎಂಬ

## ನೂತನ ಸಾಮಾಜಿಕ ನಾಟಕ


ಲೇಖಕರು :—

**ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ.ಎ.,**



**ಪುಸ್ತಕಗಳು ದೊರೆಯುವ ಸ್ಥಳ:—**

ಯಂ. ವಿ. ಶೇಷಾದ್ರಿ ಅಂಡ್ ಕಂಪನಿ, ಬಳೇಪೇಟೆ, ಬೆಂಗಳೂರು ಸಿಟಿ.





1938.

ಪ್ರಥಮ ಮುದ್ರಣ]          [ಬೆಲೆ 8 ಆಣೆ

॥ ಶ್ರೀ ॥

# "ಲೋಭಿ"

ಅಥವಾ

# "ಕಾರ್ಪಣ್ಯ"

---

(ನೂತನ ಕನ್ನಡ ಸಾಮಾಜಿಕ ನಾಟಕ.)

## ಪಾತ್ರಗಳ ವಿವರ.

---

| | | |
|---|---|---|
| 1. | ಗಂಗಾಧರ ಭಟ್ಟ | ಲೋಭಿ. |
| 2. | ಈಶ್ವರಭಟ್ಟ B. A., | ಗಂಗಾಧರಭಟ್ಟನ ಮಗ. |
| 3. | ನರಹರಿಶಾಸ್ತ್ರಿ | ಶ್ರೀಮಂತ. ಈಶ್ವರನ (ಹೆಣ್ಣುಕೊಟ್ಟ) ಮಾವ. |
| 4. | ಪುರುಷೋತ್ತಮ್ B. A., | ಈಶ್ವರನ ಕಾಲೇಜ್ ಸ್ನೇಹಿತ. |
| 5. | ಶ್ಯಾಮರಾಯ | ಗಂಗಾಧರನ ಮೈದುನ. |
| 6. | ಮುದ್ದ | ಗಂಗಾಧರನ ನಂಬಿಕೆಯಾದ ಸೇವಕ. |
| 7. | ಸಂಗಪ್ಪ | ಗಂಗಾಧರನಿಂದ ಸಾಲಪಡೆದವನು. |
| 8. | ಸುಂದರಿ | ಗಂಗಾಧರನ ಮಗಳು. |
| 9. | ಶಾರದೆ | ಗಂಗಾಧರನ ಸೊಸೆ. |
| 10. | ಕಮಲು | ಶ್ಯಾಮರಾಯನ ಮಗಳು. (ಈಶ್ವರನ ಎರಡನೆಯ ಹೆಂಡತಿ.) |
| 11. | ಸುಬ್ಬಮ್ಮ | ಗಂಗಾಧರನ ತಂಗಿ (ವಿಧವೆ.) |
| 12. | ನಾಗೂಬಾಯಿ | ಗಂಗಾಧರನ ಪರಿಚಾರಿಕೆ (ವಿಧವೆ.) |
| 13. | ಇತರ ಪಾತ್ರಗಳು | ಪುರೋಹಿತ, ಬೀದಿಹೋಕರು, ಹುಡುಗರು, ಡಕಾಯಿತಿಗಳು (ಕೊಳ್ಳೆಗಾರರು.) |

# " ಲೋಭಿ "

ಅಥವಾ

# " ಕಾರ್ಪಣ್ಯ "

ದೃಶ್ಯ ೧ ] [ ಸ್ಥಾನ: ಗಂಗಾಧರಭಟ್ಟನ ಮನೆ.

(ಪಾತ್ರಗಳು:-ಗಂಗಾಧರಭಟ್ಟ-ಆಳು ಮುದ್ದ-ನಾಗೂಬಾಯಿ-ಈಶ್ವರ-ನರಹರಿಶಾಸ್ತ್ರಿ)

---

ಗಂ:—ಲೋ ಮುದ್ದ ! ಮುದ್ದ !

ಮು:—ಬಂದೇ ಬುದ್ಧಿ ! (ಬಂದು) ಕರದ್ರಾ ಬುದ್ಧಿ !

ಗಂ:—ಈಶ್ವರಪ್ಪನೋರು ಬಂದರೇನೋ ಕಾಲೇಜಿನಿಂದ ?

ಮು:—ಬಂದ್ರೋ ಅದೆಂಗೋ ಗೊತ್ತಿಲ್ಲ ಬುದ್ಧಿ !

ಗಂ:—ಥೂ ಮೂಢ ! ಉಂಟು-ಇಲ್ಲ, ಅಷ್ಟು ಹೇಳೋ.

ಮು:—ಅಪ್ಪಣೆ ಬುದ್ಧಿ !

ಗಂ:—ನಿನ್ನ ತಲೆ-ಅಪ್ಪಣೇಂತೆ ! ಬಂದ್ರೇನೋ ಅಂತಂದ್ರೆ-"ಅಪ್ಪಣೆಬುದ್ಧಿ"

ಮು:—ತಡೀರಿ ಬುದ್ಧಿ ! ನೋಡ್‌ಬುಟ್ ಬತ್ತೀನಿ. ಓಟು ನೆಪ್ಪಿಲ್ಲ.

ಗಂ:—ಏನು ನೋಡಿ ಬರೋದು ? ಬರಹೇಳೋ ಅಂದ್ರೆ ನೋಡಿ ಬರ್ತಾನಂತೆ ಮುಟ್ಠಾಳ !

ಮು:—ಅಂಗೆ ಬುದ್ಧಿ ! (ಮುದ್ದನು ಹೋಗುವನು.)

ಗಂ:—(ಸ್ವಗತ) ಈಶ್ವರನಿಗೆ ನರಹರಿಶಾಸ್ತ್ರಿಗಳ ಮಗಳು ಶಾರದೆಯನ್ನು ತಂದ ಮದುವೆಮಾಡಬೇಕು. ಶಾರದೆ ಅಚ್ಚುಮೆಚ್ಚಾಗಿದ್ದಾಳೆ. ಅವರಪ್ಪ

ನಿಗೆ ಅವಳು ಒಬ್ಬಳೇ ಮಗಳು. ಶಾಸ್ತ್ರಿಗಳಿಗೆ ಗಂಡು ಸಂತತಿ ಇಲ್ಲ ಇನ್ನು ಹುಟ್ಟುವಹಾಗೂ ಇಲ್ಲ. ಶಾರದೇನ್ನ ತಂದು ಈಶ್ವರನಿಗೆ ಗಂಟು ಹಾಕಬೇಕು. ಆಗ ನರಹರಿಶಾಸ್ತ್ರಿ ಆಸ್ತಿ ನಮಗೆ ಸೇರುತ್ತೆ. ಇವ ನಿದ್ದಾನಲ್ಲ—ಈ ಈಶ್ವರ! ಎಷ್ಟು ಬಡಕೊಳ್ಳಲಿ ಇವನ ತಲೇಲ್ ಹಿಡಿ ಯೋಲ್ಲ. ಬೇಡಕಾಣೋ ಈಶ್ವರ! ಈ ಕಾಲದಲ್ಲಿ ಆಸ್ತಿ ಅನ್ನೋದು ಬಿಟ್ಟೆ ಬರೋಲ್ಲ. ಈ ದಿಕ್ಕಿಲ್ಲದವರವುನೇಲ್ ಹೆಣ್ ತಂದ್ರೆ ಮನೆ ಲಿರೋದುಕ್ಕೂ ದರಿದ್ರ ಮುಚ್ಚಿಹೋಗುತ್ತೆ ಕಾಣೋ ಅಂತ ಎಷ್ಟು ಬಗೇಲಿ ಹೇಳಲಿ—ಉಹುಂ! "ನೀಕಿ ಬೆಬ್ಬೆ ವಿಾತಾತಕಿ ಬೆಬ್ಬೆ" ಅಂತಾನೆ ಏನು ಮಾಡಲಿ ಈ ಹಾಳು ಹುಡುಗನ್ನ ಕಟ್ಟಿಕೊಂಡು? ಅವರಮ್ಮ ಏನೋ ಹೇಳಿದಳಂತೆ—ಸಾಯೋವಾಗ. ಆ ದರಿದ್ರಭಿಕಾರಿ—ಅವಳ ತಮ್ಮ—ಆ ಶ್ಯಾಮರಾಯ—ಅವನ ಮಗಳು—ಆ ಕಮಲೂನ ತಂದು ಈಶ್ವರನಿಗೆ ಮದುವೆ ಮಾಡಿಕೋಬೇಕೂಂತ. ಅದನ್ನೇ ಮಾಡಿಕೋತೀನಿ ಅಂತಾನೆ ಈ ಹೆಣ್ಣು ಮುಂಡೇದು. ಅಲ್ಲವೋ ಬೇಡವೋ ಮಗು! ಅಂತ ಒಳ್ಳೆ ಮಾತಿನಲ್ಲಿ ಹೇಳಿದೆ. ಉಹುಂ! ಕೇಳವೊಲ್ಲ. ಮಾಡ್ಕೋ ತೀಯೋ ಇಲ್ಲವೋ? ಅಂತ ಗದರಿಸಿದೆ. ಅಲ್ಲ—ಈ ಮಡ್ಡಿ ಮುಂಡೇದಕ್ಕೆ ದುಡ್ಡಿನ ಮರ್ಮ ಹೇಗೆ ತಿಳಿಯೋದು-ಯಾವಕಾಲಕ್ಕೆ ತಿಳಿಯೋದೂಂತ? ಹಾಂ!

(ಪ್ರಕಾಶ) ನಾಗೂ! ನಾಗೂ!

ನಾಗೂ:—(ಪ್ರವೇಶಿಸಿ) ಕರೆದ್ರಾ ಅಂಪ್ರೆ?

ಗಂ:—ಹೌದು ನಾಗೂ! ಕಾಫಿ ಮಾಡಿದ್ದೀಯಾ?

ನಾಗೂ:—ಮಾಡಿದ್ದೇನೆ—ತರಲೆ?

ಗಂ:—ಬೇಗತಾ—ಈಶ್ವರನು ಬೇರೆ ಬಂದು ಬಿಡ್ತಾನೆ ಆಮೇಲೆ. ಎಷ್ಟು ಮಾಡಿದ್ದೀಯಾ ಕಾಫೀನಾ?

ನಾಗೂ:—ನಿಮ್ಮೊಬ್ಬರಿಗೇ! ಇನ್ಯಾರಿಗೆ ಬೇಕು? ನನಗಂತೂ ಈ ಕಾಫಿವಾಸ ನೇನೇ ಹಿಡಿಯೋಲ್ಲ!

ಗಂ:—ಸರಿ. ಹಾಗೆಯೇ ಇರಬೇಕು. ಸುಮ್ಮನೆ ಹಾಳುಮಾಡಬಾರದು–ತಿಳೀತ್ತೇ ?

(ನಾಗೂ ಹೋಗುವಳು)

(ಸ್ವಗತ) ನರಹರಿಶಾಸ್ತ್ರಿಗಳನ್ನು ಬರಹೇಳಬೇಕು. ಆತ ಒಬ್ಬ ಹಳೇ ಕಂದಾಚಾರದವನು. ಜಾತಕ ಸರಿಬೀಳಲಿಲ್ಲ ಹಾಗೆ ಹೀಗೆ ಅಂತಾನೆ. ಆವರೇನು ? ಹುಡುಗನ ಜಾತಕವನ್ನೆಲ್ಲಾ ಸರಿಮಾಡಿಸಿಬಿಟ್ಟಿದ್ದೀನಿ ಆ ಶಾಸ್ತ್ರಿಗಳ ಕೈಯ್ಯಲ್ಲಿ. ಪುರೋಹಿತ ರಾಮಾಶಾಸ್ತ್ರಿಯೇನೋ ಗೊಣಗಿದ ನಾ ಒಲ್ಲೆ ಅಂತ ನಾನಂದೆ–ಶಾಸ್ತ್ರಿಗಳೆ ಇದು ಆಸ್ತಿ ವಿಚಾರ. ಗೊಣಗಗಿಣಗಬೇಡಿ. ನಿಮಗೆ ಕೊಟ್ಟಿರೋ ಹತ್ತು ರೂಪಾಯಿ ಬಿಟ್ಟೇ ಆಸ್ನಿ. ಇನ್ಯಾಕದರಯೋಚನೆ ? ಇದರಮೇಲೆ ಮದುವೆ ಪೌರೋಹಿತ್ಯ ಬೇರೆ ನಿಮ್ಮದೆ. ಸಂಭಾವನೆ ಒಂದೈದುರೂಪಾಯಿ ಹೆಚ್ಚಾಗಿ ಕೊಡೂಂತ ನರಹರಿಶಾಸ್ತ್ರಿಗಳಿಗೆನಾನು ಶಿಫಾರಸು ಮಾಡ್ತೀನಿ ಅಂತಂದೆ. ಸರಿಪಡಿಸಿಬಿಡಿ–ಈಶ್ವರನ ಜಾತಕಾನಾ ಅಂದೆ. ಆಯಿತು. ಈಶ್ವರನ ಜಾತಕವೂ ಈಗ ಸರಿಯಾಗಿದೆ ಹೆಣ್ಣಿನ ಜಾತಕಕ್ಕೆ. ಅಷ್ಟಲ್ಲದೇನು ? ನರಹರಿಶಿಾಸ್ತ್ರಿಗಳ ಆಸ್ತಿ ನಮಗೆ ಸೇರಿತು ಅಂದ್ರೆ–ಆಗ ನಮ್ಮ ಜಾತಕವೂ ಸರಿಹೋಯಿತು ಅಂತಲೇ ಲೆಖ್ಖ.

[ ನಾಗೂ ಪ್ರವೇಶಿಸಿ ಕಾಫಿಯನ್ನು ಕೈಯಲ್ಲಿ ಹಿಡಿದು ]

ನಾಗೂ:—(ಸ್ವಗತ) ಈ ಜಿಪುಣ ಮುದುಕನೋ ! ಇವನಕಾಫಿಯೋ ! ಇವನ ಮುಖಕ್ಕೆ ಬೆಂಕಿ ಹಾಕಬೇಕು. ಬರೀ ಕಾರ್ಪಣ್ಯ! ಏನು ಹೊತ್ತುಕೊಂಡ್ಹೋಗ್ತಾನೋ ಹೋಗೋವಾಗ. ನನಗೆ ಬೇರೆ ಆಡ್ಡಿ. ಕಾಫಿಕುಡೀ ಕೂಡ್ದು ಅಂತ. ಅಡಿಗೇ ಮನೇ ಹತ್ತರಲೇ ಕಾವಲು ಯಾವಾಗ ನೋಡಿದ್ರೂ ಸಾಸುವೆ ಯೇನಾಯಿತು ? ಉಪ್ಪಿನ ಲೆಕ್ಕ ಹೇಳು. ಅಕ್ಕಿ ಯಾಕಿಷ್ಟು ಖರ್ಚಾಯಿತು ಅಗಲೇ ? ಪಕ್ಕದ ಮನೇಯಿಂದ ಬೆಂಕಿ ತಕ್ಕೊಂಡು ಬಾ ಒಲೇ ಹಚ್ಚೋಕೆ-ಎಣ್ಣೆಯಾಕೆ ಕರ್ಚು

ಮಾಡ್ತೀಯಾ ? ತರಕಾರಿ ಯಾಕೆಮಾಡಿದೆ? ಅನ್ನಾಸಾರುಮಟ್ಟಿಗೆ ಮಾಡಿದ್ರೆ ಸಾಲದೆ? ದೇವರಿಗೆ ಯಾಕೆ ಆಗಲೇ ದೀಪಹಚ್ಚಿಟ್ಬಿಟ್ಟೆ ? ಎಣ್ಣೆ ನಷ್ಟ ಆಗೋಲ್ವೆ? ಅಂತ ಏನೇನೋ ಒಂದುಸಾವಿರ. ಇವನ ಕಾಟ ಬರಬರತಾ ಬಹಳ ಹೆಚ್ಚಿಹೋಯಿತು. ಈ ಹಾಳು ಮುದುಕನ ಗೋಳಿಗೆ ಬೆಂಕಿ ಹಾಕಿದ್ರು! ಅಪ್ಪ! ದೇವರೇ! ಏನಂತಾ ಸೃಷ್ಟಿ ಮಾಡಿದೆಯಪ್ಪಾ ಈ ವಿಚಿತ್ರ ಮೃಗಾನ? ಕಾಫಿ ಸ್ಟ್ರಾಂಗಾಗಿ ಮಾಡಿ ಮುಕ್ಕಾಲು ಕುಡಿದು ಕಾಲು ಭಾಗಕ್ಕೆ ಬಿಸಿ ನೀರು ಸೇರಿಸಿ ತಂದಿದ್ದೇನೆ. ಕುಡೀಲಿ ಕರ್ಮಿಷ್ಠ ಮುಂಡೇದು! ಅಲ್ಲ! ದುಡ್ಡು ಮಿಗುತ್ತೆ ಅಂದರೆ ಕಲಗಚ್ಚು ಬೇಕಾದ್ರು ಕುಡಿದುಬಿಟ್ಟು ಸುಮ್ಮನೆ ಇದ್ದುಬಿಡ್ತೀನಿ ಅಂತಾನೆ ಈ ಮುದುಕ!

(ಪ್ರಕಾಶ) (ಮುಂದೆ ಬಂದು) ಹಿಡೀರೀ ಅಂದ್ರೆ! (ಕಾಫಿ ಕೊಡುವಳು)

ಗಂ:—ನಾಗೂ! ಬಹಳ ಸ್ಟ್ರಾಂಗಾಗಿ ಮಾಡಿದ್ದೀಯೇನು ಕಾಫೀನ?

ನಾಗೂ:—ಸ್ಟ್ರಾಂಗೂ ಇಲ್ಲ-ಗೀಂಗೂ ಇಲ್ಲ. ಕುಡಿದುನೋಡಿ. ಸ್ಟ್ರಾಂಗಾಗಿದ್ರೆ ಮೈಗೆ ವಿರೋಧ ಅಂದಿದ್ರಲ್ಲ-ಅದಕ್ಕೆ ಒಂದು ಚಿಟಿಕೆ ಪುಡಿ ಹಾಕಿ-ಒಂದು ತೊಟ್ಟು ಹಾಲು ಬೆರಸಿ ಬಿಸಿನೀರು ಹೆಚ್ಚಾಗಿ ಹಾಕಿದ್ದೇನೆ.

ಗಂ:—ಭೇಷ್! ನಾಗೂ! ಅದು ಜಾಣತನ ನೋಡು. ಹಾಗಲ್ಲದೆ ಸಿಕ್ಕಾ ಪಟ್ಟೆ ಕಾಫೀ ಕುಡೀತಾ ಇದ್ರೆ-ಸಂಸಾರ ಸುಟ್ಟು ಬೂದಿಯಾಗಿ ಹೋಗುತ್ತೆ ನೋಡು.

ನಾಗೂ:—ಹಾಂ! ನೀವು ಬೂದಿ ಅಂದಮೇಲೆ ಜ್ಞಾಪಕಕ್ಕೆ ಬಂತು ನೋಡಿ. ಬೆಳಿಗ್ಗೇಗೆ ಕಾಫಿಪುಡಿ ಇಲ್ಲ.

ಗಂ:—ಏನಿದು ನಾಗೂ! ಏನು ಹೀಗಾದ್ರೆ ಅಂದೆ? ಈ ಮನೆ ಬಾಳಲಿಲ್ಲ. ಹೆಸರು ಹೇಳಲಿಲ್ಲ.. ನೋಡು. ಅಲ್ಲ ನಾಗೂ! ನೆಟ್ಟಗೆ ಎಂಟು ದಿವಸ ಆಗಿಲ್ಲ ಎರಡಾಣೆ ಕಾಫೀ ಪುಡಿ ತಂದು-ಹಾಂ! ಆಗಲೇ ಆಗಿಹೋಯಿತು ಅಂತಂತೀಯಲ್ಲಾ! ಹೂಂ! ಅದರಲ್ಲಿಯೂ ಮೂರು ದಿವಸ ನಾನು ಮನೇಲಿ ಕಾಫೀ ಕುಡಿಲೇ ಇಲ್ಲ. ಕೇಳೋವಾಗಲೇ ಎದೆ ದಡುಂ ಅಂತ ಒಡೆದುಹೋಗ್ತಾ ಇದೆಯಲ್ಲಾ? ಹೀಗಾದರೆ ನಾವು ಬದುಕಿ ಬಾಳಿ

ಹೆಸರು ಹೇಳಿದಹಾಗೆಯೇ ಆಯಿತು. ಸರಿ–ಸರಿ! ಈ ಕಾಫಿ ಹಾಗೆಯೇ ಇಟ್ಟಿರು. ಬೆಳಗ್ಗೆ ಬಿಸಿಮಾಡಿ ಕುಡಿದುಬಿಟ್ಟರಾಯಿತು.

ನಾಗೂ:—ಸುಮ್ಮನೆ ಕೂಗಾಡಬೇಡೀಂದ್ರೆ ಕಂಡಕಂಡದ್ದಕ್ಕೆಲ್ಲಾ. ಹೀಗೆಲ್ಲಾ ಅಂದ್ರೆ ನನ್ನ ಕೈಲಿ ಸುದಾರಸೋಕಾಗೋದಿಲ್ಲ ನಿಮ್ಮ ಸಂಸಾರಾನಾ.

ಗಂ:—ನಾಗೂ! ಇದೇನು ನೀನು ಹೇಳತಾಇರೋದು? ಏನೂಂತ?

ನಾಗೂ:—ಅಲ್ಲಾ ಅಂದ್ರೆ–ಹಾಗಾದ್ರೆ ನಾನು ಕಾಫೀಮಾಡಿ ಕುಡಿದುಹಾಕಿಬಿಟ್ನೇ? ದೇವರೇ ಅಂತ ರಾಗಿ ಹುರಿಹಿಟ್ಟು ಮಜ್ಜಿಗೇಲಿ ಕಲಸಿ ತಿಂದ್ಕೋತೀನಿ ನನ್ನಪಾಡಿಗೆ.

ಗಂ:—ನೀನು ಕುಡಿದೇ ಅಂತ ಅಲ್ಲ ನಾಗೂ!

ನಾಗೂ:—ಮತ್ತೇನಂತೆ ಅಷ್ಟಿಲ್ಲದೆ? ಅಲ್ಲಾ ಅಂದ್ರೆ. ನಿನ್ನೆ ಕಾಫಿಮಾಡಿ ನಿಮಗೆ ತಂದುಕೊಟ್ನೆಲ್ಲಾ–ಆಗ ಕಾಫಿಪುಡಿ ಒಲೇಮೇಲಿತ್ತು. ಒಳಗೆ ಹೋಗಿ ನೋಡೋವೇಳೆಗೆ ಬೆಕ್ಕು ಬಂದಿದ್ದೇ ತಡ ಪುಡೀನೆಲ್ಲಾ ಒಲೆ ಬೂದೀಲಿ ಚೆಲ್ಲಿಬಿಟ್ಟಿದೆ. ಇಷ್ಟು ಹೇಳೋವೇಳೆಗೆ ಕೂಗಾಡಿಬಿಟ್ರಿ?

ಗಂ:—ಕೂಗಾಡೋದೇನು ನಾಗೂ? ನನ್ನತಲೆ ಕಂಡ್ರೆ ನಿಮಗ್ಯಾರಿಗೂ ಆಗೋಲ್ಲ. ನನ್ನ ಸಂಕಟ ನನಿಗೇ ಗೊತ್ತು. ಸಂಭಾಳಿಸೋದು ಅಂದ್ರೆ ರಟ್ಟೆ ಮುರಿದುಹೋಗುತ್ತೆ. ಬಿಟ್ಟೆ ಬಿದ್ದುಹೋಯಿತೇನು? ಬೆಕ್ಕು ಮನೇಲಿ ಬೇಡಾಂದ್ರೆ ಕೇಳಿದರಲ್ಲವೆ? ಆ ಹಾಳು ಬೆಕ್ಕನ್ನು ಸೀಳಿಹಾಕಬೇಕು! ಇಲಿಕಾಟ ಆಯ್ತು ಬೆಕ್ಕಿನಕಾಟ ಒಂತು. ಇದಕ್ಕೆ ಬೇರೆ ದುಡಿದು ಹಾಕಬೇಕು ಇನ್ನು–ಎಲ್ಲಾ ನನ್ನ ಗ್ರಹಚಾರ ನಾಗೂ! ನನ್ನಗ್ರಹಚಾರ!

ನಾಗೂ:—ಇದಕ್ಕೆ ನಾನೇನು ಮಾಡೋಕ್ಕಾಗುತ್ತೇಂದ್ರೆ? ಚೋಚೆನ್ನಾಗಿದೆ ನೀವು ಹೇಳೋದು. ಅಲ್ಲ–ಸಂಬಳ ಕೊಡಿ ಅಂದ್ರೆ–ಇವತ್ತಾಗಲಿ–ನಾಳೆ ಆಗಲಿ ಅಂತೀರಿ. ಕೆಲಸ ದುಡಿಸಿಕೊಳ್ಳೋವರಲ್ಲಿ ಒಂದು ತುಸಾ ಕಮ್ಮಿ ಆಗಬಾರದು. ಅದೆಲ್ಲಾ ಯಾತಕ್ಕೆ? ನೀವು ಹೇಳೋದೂ ಬೇಡ–ನಾನು ಕೇಳೋದೂ ಬೇಡ. ನಾನು ನಿಮ್ಮ ಹತ್ತಿರ ಕೊಟ್ಟಿರೋ

ಐನೂರು ರೂಪಾಯಿ–ಬಡ್ಡಿ–ನನ್ನ ಸಂಬಳ–ಎಲ್ಲಾ ಲೆಕ್ಕಾಮಾಡಿ ಕೊಟ್ಟುಬಿಡಿಆತ್ತಲಾಗೆ ನಾನು ಹಾಳಾಗಿ ಹೋಗ್ತೀನೆ ಇಲ್ಲಿಂದ. ಹೆಂಗಸ ರಿಲ್ಲದ ಸಂಸಾರದಲ್ಲಿ ಚಾಕರೀಗೆ ಸಿಗಹಾಕ್‌ಕೊಂಡ್ರೆ–ಇನ್ನು ಯಾವ ಗತೀ ಬರುತ್ತೇಂತೆ? ಪಾರ್ವತಮ್ಮನೋರು ಇದ್ದಾಗ...............

ಗಾ:—(ಸ್ವಗತ) ನಾಗೂನೂ ಹೊರಟುಹೋದರೆ ಪಿಂಡಕ್ಕೇ ಗತಿ ಇಲ್ಲ ದಂತೆ ಆಗುತ್ತೆ ಆ ಮೇಲೆ (ಪ್ರಕಾಶ) ನಾಗೂ! ಸ್ವಲ್ಪ ಸುಧಾರಿಸು ಹಾಳು ಕೋಪ ಅನ್ನೋದು ಎಲ್ಲರಿಗೂ ಬರುತ್ತೆ ನೋಡು, ಏನು ಮಾಡೋದು? ಸ್ವಲ್ಪ ನುಂಗಿಕೋಬೇಕು ಕೋಪಾನ. ಪದಾರ್ಥಗಳು ಮನೇಲಿ ಸುಮ್ಮನೆ ಹಾಳಾಗತಾ ಇದ್ರೆ ಯಾರಿಗೇನು ಸುಖ ಅಂತಂದೆ. ಅಷ್ಟೆ. ಅದು ಹೋಗಲಿ–ನಾಗೂ! ನಾಳೆ ಮನೇಲ್ಲಿ ಅಡಿಗೇ ಇಲ್ಲ. ಗುಂಡಾಶಾಸ್ತ್ರಿಗಳ ಮನೇಲ್ಲಿ ವೈಕುಂಠ ಸಮಾರಾಧನೆ. ಅಲ್ಲಿ ಊಟವಾ ದಮೇಲೆ–ಹಾಗೆ ಕಾಯಿ ಪಳ್ಳಿದ–ಏನಾದರೂ ಈಸುಕೊಂಡು ಬಂದು ಬಿಡು–ನಾಳೆ ರಾತ್ರೀಗೂ ಆಗಿಹೋಗುತ್ತೆ.

(ನಾಗು ಹೋಗುವಳು. ಕಾಫಿ ಕೈಯ್ಯಲ್ಲೇ ಇದೆ.)

[ಹೊರಗಡೆ ಈಶ್ವರನ ಪ್ರವೇಶ]

ಈಶ್ವರ:—ಅಪ್ಪಾ!

ಗಂಗಾ:—(ಸ್ವಗತ) ಎಲ್ಲಾ ಕಾಫೀ ಕುಡಿಯೋಸಮಯಕ್ಕೇ ಬರಬೇಕೇ? (ಪ್ರಕಾಶ) ಬಾರೋ ಈಶ್ವರ!

ಈ:—ಏನಪ್ಪಾ ಕರೆದೆಯಂತೆ?

ಗಂಗಾ:—ಬಾ ಹೇಳ್ತೀನಿ–ಕೂತುಕೋ. ಸಮಾಧಾನದಿಂದ ಕೇಳು. ಆತುರ ಪಡಬೇಡ.

ಈ:– ಆ ಮದುವೆ ಸಮಾಚಾರ ತಾನೇನಪ್ಪಾ? ಹೇಳಿದ್ದೇ ಹೇಳ್ತಾಇರು ನೀನು.

ಗಂ:—ನೋಡಿದೇನೋ! ಅದೇ ನಾನು ಬೇಡ ಅಂದದ್ದು. ಸಾವಧಾನ ಇಲ್ಲ. (ಅವನ ಮುಖವನ್ನು ನೋಡಿ) ಇದೇನೋ ಈಶ್ವರ? ಇದೇನು ಗುಳ್ಳೆ

ಗಳು ನಿನ್ನ ಮುಖದಲ್ಲೀಂತ? ಉಷ್ಣ! ಅಲ್ಲಾಪ್ಪಾ! ಆ ಹಾಳು ಕಾಫೀ ಕುಡಿಂಬೇಡಾಂತೀನಿ. ಉಷ್ಣ! ಪರಮ ಉಷ್ಣ! ಕೇಳಿವರೆ ಅಲ್ಲಪೆ? ಎಷ್ಟು ಬಡಕೊಳ್ಳಲಿ ಹೇಳೋ? ಅನ್ನದಗಂಜೀನ್ನಾದರೂ ಕುಡೀಬಾರ ದೇನಪ್ಪಾ ಎರಡು ಉಪ್ಪಿಕಲ್ಲು ಹಾಕಿಕ್ಕೊಂಡು? ತಂಪಾಗಿರುತ್ತೆ ನೋಡು.

ಈ:—ಅದು ಮೊಡವೇಪ್ಪಾ! ಕಾಫೀಗೂ ಅದಕ್ಕೂ ಏನು ಸಂಬಂಧ?

ಗಂ:—ಸರಿ–ಹೋಗಲಿ ಬಿಡು. ನಾನು ಹೇಳೋದು ನಿಮುಗ್ಯಾರಿಗಾದ್ರೂ ಅರ್ಥ ವಾದರಲ್ಲವೆ? ನಿಮ್ಮ ಗುಣಗಳೇ ಬೇರೆ. ನನ್ನ ಗುಣಗಳೇ ಬೇರೆ.

ಈ:—ಅಯ್ಯೋ ಬಿಡಪ್ಪಾ ಹೋಗಲಿ. ಯಾಕೋ ಬರಬರತಾ ಬಹಳ ಅಸ ಹ್ಯವಾಗಿಹೋಯಿತು. ಯಾರಿಗೆ ಬೇಕಾಗಿದೆ ನಿನ್ನ ತರ್ಕ? ನಿನ್ನ ಕಾಲದಲ್ಲಿ ನಮಗೆ ಸುಖವಿಲ್ಲ. ಅದು ಗೊತ್ತೇ ಇದೆ. ಅವ್ವ ನಿದ್ದಾಗ ಎಲ್ಲಾ ವ್ಯಕ್ತವಾಗಿಯೇ ಹೇಳಿದ್ದಾಳೆ. ಹೂಂ! ಹಣೇಲ್ ಬರ ದಹಾಗೆ ಆಗಲಿ

ಗಂ:—ಬೇಡವೋ ಈಶ್ವರ! ಕುತರ್ಕ ಬೇಡ ಅಂದೆ. ದೊಡ್ಡವರನ್ನು ಇದು ರಿಸಿ ಮಾತನಾಡಬಾರದೋ ಈಶ್ವರ! ಬಹಳ ಪಾಪ ನೋಡೋ!

ಈ:—ಅಪ್ಪಾ! ನಿಜ! ನಿನ್ನೊಂದಿಗೆ ಮಾತನಾಡೋದು ಪಾಪ-ಒಪ್ಪಿಕೊಂಡೆ

ಗಂ:—ಏನೋ ಇದು ಈಶ್ವರ! ಯಾಕೆ ನೀನುಹೀಗಾಗಿಬಿಟ್ಟೇಂತ? ಅಲ್ಲವೋ ಈಶ್ವರ! ಸ್ವಲ್ಪ ತಡೆದು ಹಿಡಿದು ಬಾಳಬೇಕು. ಹಾಗಿದ್ದ ಹೊತ್ತಿಗೇ ಏನೋ ನೋಡು ನಾನೂ ಒಂದೆರಡುಕಾಸು ಆಸ್ತಿ ಅಂತ ಮಾಡಿಟ್ಟಿದ್ದೆ ನಪ್ಪ ನಿನಗೆ.

ಈ:—ಅದು ಹೋಗಲೀಪ್ಪ! ಕರೆದ್ದುದ್ಯಾಕೆ ಹೇಳು ಬೇಗ–ನನಗೆ ಕೆಲಸ ಏದೆ–ಹೋಗಬೇಕು.

ಗಂ:—ಅದೇಕಾಣೋ! ನೋಡು. ಹೆಣ್ಣಿನ ಜಾತಕ ತರಿಸಿದ್ದೆ. ಎಲ್ಲಾ ನೋಡಿದೆ. ನಿನ್ನ ಜಾತಕಾನೂ ಪಕ್ಕದಲ್ಲಿಟ್ಟು. ಗುಣಿಸಿದೆ. ತಾರಾಬಲ ನೋಡಿದೆ. ಚಂದ್ರಬಲ ನೋಡಿದೆ–ರಾಶಿ ಚಕ್ರ ಎಲ್ಲಾ ನೋಡಿದೆ–ಧನ ರಾಶಿ ಬಹಳ ಉತ್ತಮವಾಗಿದೆ ನೋಡು!

ಈ:—ಯಾರದಪ್ಪಾ ?

ಗಂ:—ನರಹರಿಶಾಸ್ತ್ರಿಗಳ ಮಗಳದೋ. ಶಾರದೇದೂ!

ಈ:—ಬೇಡಪ್ಪಾ.

ಗಂ:—ಏನೋ ಈಶ್ವರ! ಹೀಗೆಂದ್ರೆ ? ಮೊಂಡತನ ಮಾಡಬೇಡ ನೋಡು.

ಈ:— ಬೇಡ ಅಂದ್ರೆ ಅದೂ ಮೊಂಡತನವೋ ನಿನಗೆ?

ಗಂ:—ಇನ್ನೇನೋ ಅಷ್ಟಿಲ್ಲದೆ ?

ಈ:—ಅವತ್ತೇ ಹೇಳಲಿಲ್ವೇನಪ್ಪಾ ನಿನಗೆ? ಅಮ್ಮನು ಸಾಯೋವಾಗ ಮಾವ ನನ್ನ ಕರೆದು ಹೇಳಿದ್ಲು "ಶ್ಯಾಮೂ! ಇನ್ನು ನಾನೇನೋ ಕಣ್ಣು ಮುಚ್ಕೊಕೋತೀನಿ. ಈ ಮಕ್ಕಳಗತಿ ಹ್ಯಾಗೋ ಎಂತೋಪ್ಪ. ನಮ್ಮ ಸುಂದರೀನ ಗುಂಡಾಪಂಡಿತರ ಮಗ ಪುರುಷೋತ್ತಮನಿಗೆ ಕೊಟ್ಟು ಮದುವೆಮಾಡಿಸು. ನಿನ್ನ ಮಗಳು ಕಮಲೂನ ನಮ್ಮ ಈಶ್ವರನಿಗೆ ಕೊಟ್ಟು ಮದುವೆ ಮಾಡು. ಇಲ್ಲದಿದ್ದರೆ ತವರುಮನೆ ಸಂಬಂಧ ತಪ್ಪಿಹೋಗುತ್ತೆ. ಹೊರಗಿನಿಂದ ಹೆಣ್ಣು ತರೋದು ಬೇಡ.'' ಅಂತಂದಳು. ನೀನೂ ಸಹ "ಇರ್‍ಲಿ? ಅದಕ್ಕೇನಂತೆ? ಹಾಗೇ ಮಾಡಿದರಾಯ್ತು" ಅಂದೆ. ಅಮ್ಮನಮಾತು ತಳ್ಳಬಾರದು ಅಂತ ನನಿಗೆ. ಈಗ ನೀನು ಹೇಳೋದು ನೋಡಿದ್ರೆ........ ......... ... .....

ಗಂ: ಸತ್ತವರ ಮಾತು ಈಗ್ಯಾಕೋ ಈಶ್ವರ? ಇದೇ ನೋಡು ಬುದ್ಧಿ ಇಲ್ಲದ ಹುಡುಗರು ಅನ್ಯೋನ್ಯ-ಮಾತನಾಡತಾ ಇರೋದು ಶುಭ ಸಮಾಚಾರ, ಅದರಲ್ಲಿ ಆಡೋದು ಸತ್ತವರ ಮಾತು. ಯಾವಾಗ ವಿವೇಚನೆ ಬರುತ್ತೋಪ್ಪ! ನಿಮಗೆಲ್ಲಾ!

ಈ:—ಇದೇನು ? ಅಮ್ಮನು ಸತ್ತಾಕ್ಷಣಕ್ಕೆ ಅಮ್ಮನ ಹೆಸರು, ಗುಣ, ಶೀಲ, ಎಲ್ಲಾ ಮರೆತುಬಿಡಬೇಕೂ ಅನ್ನು. ಅಮ್ಮನ ಹೆಸರ್ಗೇ ಅಶುಭವೋ ?

ಗಂ: –ಹಾಗಲ್ಲವೋ ಈಶ್ವರ! ಶುಭ ಮಾತನಾಡ್ತಾ ಇರುವಾಗ ಸತ್ತವರ ಪ್ರಸ್ತಾಪ ಬೇಡ ಅಂದೆ. ಇರಲಿ. ಈಗ ನೋಡು. ಜಾತಕ ಸರಿ ಹೋಯ್ತು ನಿನ್ನದು ಇದೇ ಅಲ್ಲವೇನಪ್ಪ-ಕೊನೇ ವರ್ಷ-ಕಾಲೇಜಿ

ನಲ್ಲಿ? ಕರ್ಚಿಗೆ ಬೇರೆ ಐನೂರು ರೂಪಾಯಿ ಕೊಡ್ತಾರೆ. ಮದುವೆ ಸಮಯದಲ್ಲಿ - ನಗೆನಟ್ಟು - ಎಲ್ಲಾ. ಒಂದು ಬೈಸ್‌ಕಲ್ ತೆಕ್ಕೊಡ್ತಾರೆ. ಒಂದು ರಿಸ್ಟ್‌ವಾಚ್ ಬೇರೆ ನಿನಗೆ ತೆಗೆದುಕೊಡಬೇಕೂಂತ ಹೇಳಿದ್ದೇನೆ. ನರಹರಿಶಾಸ್ತ್ರಿಗಳಿಗೆ. ಆಗಲಿ ಅಂತ ಕೂಡ ಹೇಳಿದ್ದಾರೆ. ನಿನ್ನ ಹೆಸರಿನಲ್ಲಿಯೇ ಸ್ವಲ್ಪ ದುಡ್ಡು ಡಿಪಾಸಿಟ್ ಮಾಡಬೇಕೂಂತ ಹೇಳಿದ್ದೇನೆ-ಅದಕ್ಕೂ ಆಗಲಿ ಅಂತ ಒಪ್ಪಿಕ್ಕೊಂಡಿದ್ದಾರೆ. ಎರಡು ಕಡೆ ಕರ್ಚೂ ನೀವೇ ಮಾಡಕೋಬೇಕೂ ಅಂದೆ. ಸರಿ ಅಂದಿದ್ದಾರೆ. ಅದಕ್ಕೂ. ಇಷ್ಟು ಏರ್ಪಾಡುಗಳೆಲ್ಲಾ ನಡೆದಿರಬೇಕಾದರೆ......

ಈ :— ಅಪ್ಪಾ! ಕಮಲೂನ್ನ ಮದುವೆ ಮಾಡಿಕೊಳ್ಳುವುದೇ ನನಗೆ ಸರಿಯಾಗಿ ತೋರುತ್ತೆ. ಇದರ ಮೇಲೆ ಈ ವರ್ಷ ಪರೀಕ್ಷೆ ಕಳೀಲಿ. ಆಮೇಲೆ ನೋಡಿಕೊಳ್ಳೋಣ-ಮುಂದಿನ ವರ್ಷವೇ ಮದುವೆ ಮಾಡಿಕೊಂಡರಾಯಿತು. ಇಷ್ಟು ದಿವಸವೇ ಕಳೀತಂತೆ-ಈ ವರ್ಷ ಕಳೆವರೆ- B. A. ಪ್ಯಾಸ್ ಆಗುತ್ತೆ. ಅಷ್ಟರಲ್ಲಿ ಅವಸರವೇನು?

ಗಂ:— ಈಶ್ವರ ಮೊಂಡತನಮಟ್ಟಿಗೆ ಮಾಡಬೇಡ. ಮದುವೆ ಈಗ ಬೇಡ ಅಂತ ನೀನಂದ್ರೆ-ಕಾಲೇಜ್ ಕರ್ಚನ್ನೆಲ್ಲಾ ಯಾರು ನಡಸೋವ್ರೂಂತ? ನನಗೆ ಶಕ್ತಿ ಇಲ್ಲ-ಖಂಡಿತವಾಗಿಯೂ ಶಕ್ತಿ ಇಲ್ಲಪ್ಪ. ಒಂದೇ-ಎರಡೇ? ನೂರಾರು ರೂಪಾಯಿಗಳು!. ನಾನು ರಿಟೈರ್ ಆದಮೇಲೆ ಪೆನ್‌ಷನ್ ತಕ್ಕೊಂಡು ಹ್ಯಾಗೋ ಈಶ್ವರ ಈ ಸಂಸಾರ ನಡಸೋದು? ನಾನು ಹಾಕ್ಕೊಂಡಿರೋ ಅಂಗಿನಾದ್ರೂ ನೋಡು (ಮಾಸಿ ಪಟ್ಟೆಹೊಡೆದ ಅಂಗಿಯನ್ನು ತೋರಿಸುವನು) ಬೇರೆ ಒಂದು ಅಂಗಿ ಹೊಲಿಸೋಣ ಅಂದ್ರೆ ಇಲ್ಲ. ಅದರಲ್ಲಿ ಬಟ್ಟೆ ಧಾರಣೆ ಬೇರೆ ಹೆಚ್ಚಾಗೋಗಿದೆ. ಬಟ್ಟೆದರ ಸ್ವಲ್ಪ ಇಳೀಲಿ ಅಂತ ಕಾದಿದ್ದೇನೆ. ಸುಮ್ಮನೆ ಹಠ ಮಾಡಬೇಡ.

ಈ:— ಅಪ್ಪಾ ಹಠವೇನು? ನಿನ್ನಿಷ್ಟ ಬಂದಂತೆ ಮಾಡಿಕೋ -ಇನ್ನು ನಾನು ಹೇಳುವುದೇನಿದೆ......ಬಲವಂತ.

ಗಂ:— ಹಾಗಿರಬೇಕು. ಅದು ಜಾಣತನ-ಮದುವೆ ಸಮಾಚಾರವೆಲ್ಲಾ ದೊಡ್ಡವರಿಗೆ ಬಿಟ್ಟುಬಿಡಬೇಕು. ಅವರು ನೋಡ್ಕೊಳ್ತಾರೆ-ನಿನಗ್ಯಾಕೆ ಅಂತಸ್ತು ಎಲ್ಲಾ.

ಈ:—ನಾನು ಹೊರಡ್ತೀನಪ್ಪಾ.......ಹೊತ್ತಾಯಿತು. ಇವತ್ತು ಕಾಲೇಜಿನಲ್ಲಿ ಡಿಬೇಟಿದೆ. ಹೋಗಬೇಕು.

ಗಂ:—ಸರಿ-ಹೊರಡು-ಅಲ್ಲಿಗೆ ನಿಶ್ಚಯವಮಾಡಿಬಿಡ್ತೀನಿ. ಎಲ್ಲ ನೀನೊಪ್ಪಿಕೊಂಡಿದ್ದೀಯಾ ಅಂತಲೇ ಪತ್ರಿಕೇನೂ ಬರಿಸ್ಬಿಡ್ತೀನಿ.

ಈ: ನಾನು ಮೊದಲೇ ಹೇಳಿದೆನಲ್ಲಾ.—ನಿನ್ಗಿಷ್ಟ ಬಂದಂತೆ ಮಾಡೂಂತ.

(ಈಶ್ವರನು ಹೊರಡುವನು).

ಗಂ:—(ಸ್ವಗತ) ಅಂತೂ ಈಶ್ವರನ್ನ ಒಪ್ಪಿಸಬೇಕಾದ್ರೆ ನನ್ನ ಹೆಣ ಹೊತ್ತು ಹೋಯಿತು. ಇನ್ನು ಆ ನರಹರಿಶಾಸ್ತ್ರಿಗಳದು ಬೇರೆ. ಪ್ರಸಂಗ ಹೇಗೆ ಮುಗೀತ್ತೋ ನೋಡಬೇಕು. ಹುಡುಗ ಒಪ್ಪಲಿಲ್ಲ ಅಂತ ಶಾಸ್ತ್ರಿಗಳಿಗೆ ಹೇಳಬೇಕು. ಆ ನೆವದಿಂದ ಆದಷ್ಟು ಅವರ ಹತ್ತಿರ ಎಳೆಯಬೇಕು. ಹೂಂ!

(ಪ್ರವೇಶ : ನರಹರಿಶಾಸ್ತ್ರಿಗಳು)

ನರ:—ಗಂಗಾಧರಭಟ್ಟರೇ !

ಗಂ:—ಬನ್ನಿ ಶಾಸ್ತ್ರಿಗಳೇ! ಹೀಗೆ ದಯಮಾಡಬೇಕು. ತಾವು ಬರೋದನ್ನೇ ಇದಿರು ನೋಡತಾ ಇದ್ದೆ.

ನರ:—ನೋಡಿ. ಮೊದಲೇ ಬರಬೇಕೂಂತ ಹೊರಟೆ. ರಾಮಾಶಾಸ್ತ್ರಿಗಳು ಸಿಕ್ಕಲಿಲ್ಲ. ಪತ್ರಿಕೇನ ಬರೆಸಿಬಿಡೋಣ ಅಂದರೆ-ಈಗ ತಾನೇ ಹೇಳಿ ಕಳುಹಿಸಿದರು. "ನಾನು ಬರುತ್ತೇನೆ-ನೀವು ನಡೀರಿ-ಗಂಗಾಧರಭಟ್ಟರ ಮನೇಗೇ''ಂತ. ಹುಡುಗನೇನಂತಾನೆ ಭಟ್ಟರೆ ?

ಗಂ:—ಹುಡುಗ! ಅದೇ ಸ್ವಲ್ಪ ತಕರಾರು ನೋಡಿ. ಹಾಂ! ಆ ನನ್ನ ಭಾವಮೈದ ....

ನರ:—ಅದೇ ಶ್ಯಾಮರಾಯರು ?

ಗಂ:—ಹೌದೂಂದ್ರೆ-ಶ್ಯಾಮರಾಯನ ಮಗಳು ಕಮಲೂ ಇದ್ದಾಳಲ್ಲಾ-ಅವಳನ್ನೇ ಮದುವೆ ಮಾಡಿಕೊಳ್ಳಬೇಕೂಂತ ಮೊದಲು ಹಠ ಹಿಡಿದ. ನಾನೂ ಹೇಳಿದೆ ಹೇಳುವ ರೀತೀಲ್ಲೆಲ್ಲಾ. ಆದರೆ-

ನರ:—ಆದರೇನು ಭಟ್ಟರೆ ?

ಗಂ:—ಈ ವರುಷ ಮದುವೆ ಬೇಡ.......B. A. ಮುಗೀಲಿ. ಬರೋ ವರ್ಷ ನೋಡಕ್ಕೊಳ್ಳೋಣ ಅಂದ.

ನರ:—ಆಮೇಲೆ ?

ಗಂ:—ನಾನಿದ್ದು ಕ್ಕೊಂಡು–ನೋಡು ವಯಸ್ಸಾದ ಹೆಣ್ಣು ಮನೆಯಲ್ಲಿಟ್ಟು ಕೊಂಡಿರುವುದಕ್ಕೆ ಅವರಿಗೆ ಸಾಧ್ಯವಿಲ್ಲ. ಐನೂರು ರೂಪಾಯಿ ಕೊಡ್ತಾರೆ. ಅಂತೆಲ್ಲಾ ಹೇಳಿದೆ–ನೀವು ಹೇಳಿದ್ದು ಒಂದೂ ಬಿಡಲಿಲ್ಲ. ಸೈಕಲ್ ಸಮಾಚಾರ–ರಿಸ್ಟ್‌ವಾಚು–ಎಲ್ಲಾ ಹೇಳಿದೆ ನೋಡಿ.

ನರ:—ನೋಡಿ ಭಟ್ಟರೆ! ನಮ್ಮನೇಲೂ ಇದೇತಾನೆ ಚರ್ಚೆ ನಡೀತು. ನಮ್ಮಾಕೆ ಅಂತಾಳೆ. ಹೆಣ್ಣಿಗೆ ತುಂಬಿದ ವಯಸ್ಸು. ಯಾವ ಕಾಲಕ್ಕೆ ಹೇಗೋ? ಈ ಚೈತ್ರಮಾಸ ಮುಗಿಯುವದರೊಳಗೆ ಮದುವೆ ಮಾಡಿ ಬಿಡಬೇಕೂ ಅಂತಾಳೆ.

ಗಂ:—ಅಂದರೆ ಇನ್ನು ಹನ್ನೊಂದೇ ದಿವಸ ಇದೆ ಅಷ್ಟೆ.

ನರ:—ಹೌದೂಂತ್ರೆ. ಅದಕ್ಕೇ.

ಗಂ:—ನೀವು ಹೇಳೋದೇನೂ ಸರಿ. ನರಹರಿಶಾಸ್ತ್ರಿಗಳೇ! ಆದರೆ ಹುಡು ಗನು ಸಂಪೂರ್ಣವಾಗಿ ಒಪ್ಪಬೇಕಲ್ಲಾ.

ನರ:—ಒಪ್ಪದೇ ಇರುವುದಕ್ಕೆ ಕಾರಣ ?

ಗಂ:—ಅದೇ " ಹಾಗೂ ನರಹರಿಶಾಸ್ತ್ರಿಗಳ ಮಗಳನ್ನೇ ಮದುವೆ ಮಾಡಿಕೋ ಬೇಕೂಂತ ಬಲವಂತ ಮಾಡಿದರೆ ಆಗಿ ಹೋಗಲಿ. ಆದರೆ ಓದಿನ ಖರ್ಚು ಐನೂರು ಎಂದರೆ ಸುತರಾಂ ಸಾಲದು. ಅವರು ಕೊಡುವ ಐನೂರು ಯಾವ ಮೂಲೇಗೆ? ದರಿದ್ರ ಪಕ್ಷ 800 ರೂಪಾಯಾದ್ರು ಬೇಕು. ಅಲ್ಲದೆ B. A. ಆದನಂತರ B. L. ಪರೀಕ್ಷೆಗೂ ಓದಿಸುವ ಭಾರ ವನ್ನು ಅವರೇ ವಹಿಸಿಕ್ಕೊಂಡರೆ ಆಗಬಹುದು " ಅಂತ ಹೇಳಿ–ಅಂದು ಬಿಟ್ಟು ಹೋದ ಹುಡುಗ. ನಾನಿದ್ದವನು ಅದೇನೋಪ್ಪ ನೀನುಂಟು ನರಹರಿಶಾಸ್ತ್ರಿಗಳುಂಟು. ನೀನೇ ಕೇಳ್ಕೋ ಅದನ್ನೆಲ್ಲಾ ಅಂತಂದೆ– ಅವಕ್ಕನನಂದ "ಅಪ್ಪಾ! ದೊಡ್ಡವರಿರುವಾಗ ನಾನ್ಯಾಕೆ ಮಾತಾಡ್ಲಿ

ನರಹರಿಶಾಸ್ತ್ರಿಗಳ ಹತ್ತಿರ? ನಾನು ಹೇಳುವಂತೆ ಅವರು ಒಪ್ಪಿಕೊಳ್ಳುವುದಾದರೆ ಆಗಲಿ–ಇಲ್ಲದಿದ್ದರೆ ಬೇಡವೇಬೇಡ" ಅನ್ನುತ್ತಾನೆ. ಇಷ್ಟರ ಮಟ್ಟಿಗಾದ್ರೂ ಒಪ್ಪುವುದಕ್ಕೆ ಬಹಳ ಕಷ್ಟ ಆಯಿತು ನೋಡಿ ಶಾಸ್ತ್ರಿಗಳೇ! ನಾನೂ, ಬೇಡಪ್ಪಾ! ಅವರು ಸಂಸಾರಸ್ಥರು ಅಂತಂಪ. "ಏನಪ್ಪ? ಅವರಿಗಿರೋದು ಒಬ್ಬಳೇ ಮಗಳು–ದೇವರು ಕೊಟ್ಟಹಾಗೆ ಇದೆ ಬೇಕಾದಷ್ಟು. ಮಾಡಲಿ ಎಲ್ಲಿ ಹೋಗುತ್ತೆ? ಮಾಡಿದರೆ ಅವರ ಮಗಳಿಗೇ ಇರುತ್ತೆ" ಅಂತ ಹೇಳಿದ ನೋಡಿ.

ನರ:—ಸಂತೋಷ! ಹಾಗೆಯೇ ಆಗಲಿ ಭಟ್ಟರೆ! ಹುಡುಗನ ಮನಸ್ಸಿಗೆ ಯಾಕೆ ಅತೃಪ್ತಿ? ಅವನಿಷ್ಟದಂತೆಯೇ ಮಾಡೋಣ.

ಗಂ:—B. L. ಓದಿಗಾಗಿ 2,000 ರೂಪಾಯಿ ಬ್ಯಾಂಕಿನಲ್ಲಿ ಅವನ ಹೆಸರಿನಲ್ಲಿಯೇ ಡಿಪಾಸಿಟ್ಟು ಮಾಡಬೇಕೂಂತಾನೆ ನರಹರಿಶಾಸ್ತ್ರಿಗಳೇ?

ನರ:—ಈಗಲೇ ಯಾತಕ್ಕೆ? ಈ ವರ್ಷ ಕಳೆದು B. A. ಪ್ಯಾಸ್ ಮಾಡಲಿ. ಮುಂದಿನ ವರ್ಷದಿಂದ ತಾನೇ? ಬಾಯಿವಾತೇ ಸಾಲದೆ? ಕೊಡುತ್ತೇನೆ ಎಂದರೆ ಕೊಡುತೇನೆ. ಆಡಿದಮಾತಿಗೆ ತಪ್ಪುವುದಿಲ್ಲ

ಗಂ:—ಅಯ್ಯೋ ಅಲ್ಲವೇಂದ್ರೆ! ನೀವು ಆಡಿದ ಮಾತನ್ನು ತಪ್ಪುತೀರಾ? ಅದಕ್ಕಲ್ಲಾಂದ್ರೆ–ಹುಡುಗರ ಸಮಾಚಾರ ನೋಡಿ. ಅವನಿಗೆ ಓದಿನಲ್ಲಿ ಬಹಳ ಗಮನ. ಅಪಾರವಾದ ಶ್ರದ್ಧೆ! ನಾಳೆ ಯಾರಕಾಲ ಹೇಗೋ ಅಂತಾನೆ. ಒಳ್ಳೆಯ ಸಮಯದಲ್ಲಿ ಹಣಕ್ಕೆ ಯಾವುದಾದರೂ ಅಡಚಣೆಯುಂಟಾದೀತು ಅಂತ. ಅಷ್ಟೆ ನೋಡಿ. ಅವನ ಭಯ. ಸಹಜತಾನೆ?

ನರ:—ಸರಿಸರಿ ಭಟ್ಟರೆ! ನಿಮ್ಮ ಎಲ್ಲಾ ಮಾತನ್ನೂ ಒಪ್ಪಿಕೊಳ್ಳುತ್ತೇನೆ. ಮನೆಯಲ್ಲಿ ಅವಳೂ ಕೂಡ ಅಷ್ಟೇ ನೋಡಿ. "ಹುಡುಗನ ಮನಸ್ಸಿಗೆ ಏನೂ ಕೊರತೆ ಉಂಟುಮಾಡಬೇಡಿ. ಏನೋ ಒಬ್ಬಳೇ ಮಗಳು-ಒಬ್ಬನೇ ಅಳಿಯ. ಇನ್ನೊಂದು ಸಲ ಈ ಸಂತೋಷವನ್ನು ಕಣ್ಣಿನಲ್ಲಿ ನೋಡುತ್ತೇನೆಯೇ?" ಅಂತಂದಳು. ನಾನೂ ಹಾಗೆಯೇ ಸರಿ ಅಂದೆ.

ಗಂ:—ಅದಕ್ಕೇ ನೋಡಿ. ನಿಮ್ಮ ಸಂಬಂಧ ಮಾಡುವುದರಲ್ಲಿ ನನಗೂ ಅಷ್ಟು ಕುತೂಹಲ.

ನರ:—ದೊಡ್ಡ ಮಾತು! ಹಾಂ! ಮನ್ನಿಸಬೇಕು-ನಾನು ಹೋಗಿಬರಲೆ?

ಗಂ:—ಆಗಬಹುದು ಶಾಸ್ತ್ರಿಗಳೇ! ಹಾಗೇ ನಿಮ್ಮ ತೋಟದಲ್ಲಿ ಒಂದೆರಡು ಎಳನೀರು!

ನರ:—ಅಯ್ಯೋ ಅದಕ್ಕೇನಂದರೆ? ಎರಡಿಲ್ಲದಿದ್ದರೆ ಹತ್ತು ಕಳಿಸ್ತೇನೆ-ನೀವಾಗಿ ಕೇಳುವಾಗ... ನಮಸ್ಕಾರ!

ಗಂ:—ನಮಸ್ಕಾರ! ಶಾಸ್ತ್ರಿಗಳೇ!



ದೃಶ್ಯ ೨]                                        [ಸ್ಥಾನ: ಬೀದಿ

[ಪಾತ್ರಗಳು ಮುದ್ದ (ಆಳು) ಸುಬ್ಬಮ್ಮ (ವಿಧವೆ—ಗಂಗಾಧರನ ತಂಗಿ]

---

ಮು:— (ಬರುತ್ತಿರುವ ಸುಬ್ಬಮ್ಮನನ್ನು ನೋಡಿ) ಅವ್ವೋ! ಎತ್ ಕಡೀಕ್ ಪಯಣ?

ಸು:—ಏನೋ ಮುದ್ದ! ಚೆನ್ನಾಗಿದ್ದೀಯೇನೋ?

ಮು:—ಇಗೋಳ್ರವ್ವ-ಇವ್ನಿ-ಚಂದ್‌ಏನ್ ಬುಡ್ರವ್ವಾ-ನಾನೂ ಒಸಿ ಸಾಲ ಮಾಡ್ಕೊಂಡು ಬುಟ್ಟೇವ್ನಿ.

ಸು:—ನಿನಗ್ಯಾಕೋ ಮುದ್ದ ಸಾಲ? ಸಂಬಳ ದುಡೀತಿಯಾ-ಸಾಕಾಗೋದಿಲ್ವೇ?

ಮು:—ಅವ್ವೋ ನೋಡ್ಕೋವ್ರಿಗೇನು ಅಂಗೇ ತೋರ್‌ತೈತೆ-ಮುದ್ದ ಬೋ ಅಣ ಸಂಪಾರ್ಸಿ ಮಡಗವ್ನೇಂತ-ಓದ್ನೇ ತಿಂಗಳ್ ಸಂಬ್ಳಾನೇ ಇನ್ನೂ ಕೊಟ್ಟಿಲ್‌ರವ್ವಾ.

ಸು:—ಅದ್ಯಾಕೋ ಇಲ್ಲವೆ ನಿಮ್ಮೆಜಮಾನ್ರಿಗೆ ಕೊಡಬೇಕೂಂದ್ರೆ?

ಮು:—ಆಯಪ್ಪನ ಕತೇ ಏಳಿತಾಯಿ. ಇನ್ನೂ ನಿಮ್ಮಂತೇವ್ರಾದ್ರೆ ಬಡವ್ರೋರ್ ಮೇಲ್ ದಯಾ ತೋರ್‍ಸ್ತೀರಿ. ಕರೆದೊಪ್ಪೊತ್ತು ಬಡಿಸ್ತೀರಿ. ಇಂದಾರೋ ಎಲೇ ಅಡ್ಕೇಗಿರ್ಲೀಂತ ಒಂದೇಡಾಣೆ-ನಾಕಾಣೇಕೊಡ್ತೀರಿ. ಒಂದು ಕುಡುತ ಕೊಡ್ತೀರಿ. ಕಟ್ಟೆ ಸುಕಾ ಅನುಬೋಸ್‌ದೋರು ತಾವು ಪಾಪ! ಈ ನಮ್ಮೆಜಮಾನ್ರೋ ಸುಟ್ಟು ಬೆಳ್ಳಿಗೆ ಸುಣ್ಣಾ ಕೂಡಾ ಕೊಡಾಕಿಲ್ಲ. ಅನ್ನೆಲ್ಡು ವರುಸ್‌ದಿಂದ ನಾನೂ ಇವ್ನಿ ಇವರ್ ಚಾಕರೀಲ್ಲೇ. ಅವತ್ತೂ ಅನ್ನೆಲ್ಡೇ. ಇವತ್ತೂ ಅನ್ನೆಲ್ಡೇ ಸಂಬ್ಳ. ಒಟ್ಟಿಗೆ ಸಾಲ್ದು ಬುದ್ಧಿ! ಗರೀಬ! ಇನ್ನೆಲ್ಡು ರೂಪಾಯಿ ಎಚ್ಚುಮಾಡಿ ಸಂಬ್ಳಾವಾ. ದಯತೋರಿ-ಅಂತ ಏಟೋ ಅಂಗಲಾಚಿ ಬೇಡ್ಕೊಂಡೆ. ಉಹುಂ! ಕೂಡಪೊಲ್‌ರು. ಮುದ್ದ! ನಿಂಗ್ ಸರಿಬುದ್ರೆ ಇರು-ಇಲ್‌ದಿದ್ರೆ ಒಂಟೋಯ್ತಾ ಇರೂಂತ ಗದರಿಸ್ತಾರೆ. ಯಾವಾಗ್ ನೋಡಿದ್ರೂ.

ಸು:—ಏನಂತೆ ಅಷ್ಟು ತಾತ್ಸಾರ? ನಂಬಿಕೆಯಾಗಿ ಕೆಲಸ ಮಾಡಿಕೊಂಡಿರೋ ಆಳಿಗೆ ಕೊಟ್ಟರೆ-ಇವನ ಆಸ್ತಿಯೆಲ್ಲಾ ಅಳಿಸಿಹೋಗುತ್ತೇನೋ ಪಾಪ! ದುಡಿಸಿಕೊಳ್ಳೋದಿಲ್ವೆ ಬೆಳಗಿನಿಂದ ಸಂಜೇವರೆಗೂ...

ಮು:—ಓದು ತಾಯಿ! ನೋಡಿ, ಕೆಲಸಾ ಏನಾರಾ ಓಸಿ ಐತೆ ಅಂತ್ಲಾ? ಅಸ ಮೇಯಿಸ್‌ಬೇಕು. ಮನೆ ತಾರಿಸ್‌ಬೇಕು. ಬಟ್ಟೆಗೋಳು ಒಗೀಬೇಕು. ಮದ್ಯೆ ಮದ್ಯೆ ಮಾತುಮಾತಿಗೂ ಮುದ್ದಾ ಅಂತಿದ್ರೆ ಬಂದೇ ಬುದ್ಧಿ ಅಂತ್ಲೇ ಇರಬೇಕು. ದೀಪಗೋಳು ಒರಸಬೇಕು. ಸುಂದರಪ್ಪನ ಇಸ್ಕೋಲಿಗೆ ಕರಕೊಂಡು ಓಗಿ ಕರೆತರಬೇಕು. ಇದರಮೇಕೆ ಲೇವಾದೇವಿ ಬೇರೆ ವಸೂಲ್‌ಮಾಡಬೇಕು-ಬಡ್ಡಿ ಅಣಗೋಳ-ಸಾಲದ್ಕೆ ತೋಟಕ್ಕೋಗಿ ತೆಂಗಿನಕಾಯಿ ತೆಳ್‌ಬೇಕು. ಕಾಯಿ ಸುಲೀಬೇಕು. ನಾರು ಉನೇ ಆಕಿ ಎಣೀಬೇಕು. ಇದರ ಮೇಕ್ಕೆ ಅಸ ಕರ ಬೇರೆ ಗಂಜಲ ಇಡೀಬೇಕು ತಾರಸಾಕೇ. ಉಲ್ಲೂ ಒಟ್ಟು-ನೀರು-ಕಲಗಚ್ಚು ಎಲ್ಲಾ ಮಡಗ್‌ಬೇಕು. ಎಲ್ಲಾ ತೀರಿತು ಅನ್ರಿ. ದೀಪ ಒತ್ತಿಸ್ ಬುಟ್ಟು-ಆಸಿಗೇನೂ ಆಸ್ದೆ ಅನ್ರಿ. ಈಟೆಲ್ಲಾ ಮಾಡಿದ್ರೇನೂ "ಸರಿ ಏನೋ ನಿಂಗ್ ಕೊಳ್ಳೇ ಓಗೋದೂ ಕೆಲಸಾ" ಅಂತಾರೆ. ಅಸ್‌ಕೊಂಡು ಸಾಯತಿರ್ಲಿ-ಬೇಕಾದಂಗೆ-ಒಂದ್ ದಿನವಾರಾ ಉಂಡೇನೋ ಮುದ್ದಾ ಅಂತ ಅವರ ಬಾಯಾಗ್ ಒಂದು ಮಾತ್ ಬಂದಿದ್ರೆ ಸರಿ!

ಸು:—ಸರಿಯಪ್ಪ! ಚೆನ್ನಾಗಿದೆ. ಹಾಗಾದ್ರೆ ಆಳೊಂದ್ರೆ ಕೆಲಸಕ್ಕೆ ಮಿತಿ ಮೇರೆ ಇಲ್ವೆ? ನಮ್ಮೆದುರು ಮನೇಲಿಲ್ವೇನೋ ತಿಮ್ಮ?

ಮು:—ಸರೀ ಕಾಣ್‌ರವ್ವಾ-ನಾಬಲ್ಲೆ-ಏಳ್‌ರವ್ವಾ-ತಿಮ್ಮ ನಮ್ ಬಾವ್‌ಮೈದುನ್ ಮಗನೇ ಅಲ್ಲವ್ರಾ?

ಸು:—ನೋಡು, ಆ ತಿಮ್ಮ ಬೆಳಗ್ಗೆ ಎಂಟುಗಂಟೇಗೆ ಬರ್‍ತಾನೆ. ೧೨ ಕ್ಕೆ ಹೊರಟೋಗ್ತಾನೆ. ಮತ್ತೆ ಮೂರಕ್ಕೆ ಬಂದ್ರೆ ಏಳಕ್ಕೆ ಸರಿಯಾಗಿ ಹೊರಟುಹೋಗ್ತಾನೆ-ಕೆಲಸ ಬಹಳ ಕಮ್ಮಿ ಸಂಬಳ 14 ರೂ. ಮನೇವ್ರು, ಬೋ: ಒಳ್ಳೇವ್ರು ಮುದ್ದ. ಮನೆ ಮಕ್ಕಳಿಗೆಲ್ಲಾ ತಿಮ್ಮ ಅಂದ್ರೆ-ಪ್ರಾಣ ನೋಡು. ಯಾವಾಗ್ ನೋಡಲಿ ತಿಮ್ಮ ತಿಮ್ಮ

ಅಂತಲೇ ಬಡಕೋತವೆ. ಒಂದು ನಿಮಿಷ ತಿಮ್ಮನ್ನ ಬಿಟ್ಟಿರೋದಿಲ್ಲ.

ಮು:—ತಿಮ್ಮ ಕೇಳ್‌ಬಂದವ್ನೆ ತಾಯಿ ಆ ಪುಣ್ಯಾವಾ! ಎಲ್ಲಾ ಆಳ್‌ಗೋಳಿಗೂ ಬತ್ತೈತ್ರಾ ಅಂತೇ ಪುಣ್ಯ! ತಿಮ್ಮನ ಎಜಮಾನ್ರಿಗೂ-ನಮ್ಮೆಜಮಾನ್ರಿಗೂ ಎಲ್ಲಿಗೆಲ್ಲಿಗೆ ತಾಯಿ! ಅವರೆಜಮಾನ್ರು ತಿಳಿದು ಬಾಳೋರು. ನಮ್ಮನೆಯಾಗೆ ಆಳೊಂತಂದ್ರೆ ಗಾಣಿಗೋರ ಮನೆ ಎತ್ತೊಂತ್ಲೆ ಬುಡಿ ಅತ್ತಲಾಗೆ. ರಾತ್ರಿ ಎಂಟೊಂಬತ್ತು ಗಂಟೆ ಒಡೀತು ಕೆಲಸಾ ಗೋಳೆಲ್ಲಾ ಪೂರೈಸ್ತು ಅಂತನ್ರಿ. ಕೈಕಾಲೆಲ್ಲಾ ಸೋತು ಬಿದ್ದೋಗೈತೆ ನೋಡಿ. ನಾ ಓಗ್ಬುಟ್ಟು ಬತ್ತೀನಿ ಬುದ್ಧಿ ಅಂತಂದ್ರೆ- "ಆಗೋಯ್ತೇನೋ ಕೆಲಸಾಗೋಳೆಲ್ಲಾ ಆಗ್ಲೆ? ಸೋಂಬೇರಿ! ಗಂಟೆ ಎಂಟು ಒಡಿಯೋಕಿಲ್ಲ ಇನ್ನೂ. ಆಗಲೇ ಒಂಟ್ ಬುಟ್‌ಯೇನಲಾಮನೇಗೆ? ಈ ತಿಂಗಳು ಏಡುರೂಪಾಯಿ ಕಮ್ಮಿಮಾಡ್‌ಬುಡ್ತೀನಿ ಸಂಬಳಾವಾ ಉಸಾರಾಗಿರು" ಅಂತಾರೆ. ಇದರ ಮೇಕ್ಕೆ ನಾ ಮನೆಗೋಯ್ತೀನಿ ಬುದ್ಧಿ ಅಂತಂದ್ರೆ ಸರಿ-ಇವರಿಗುಟ್ಟು ಬುಡುತ್ತೈತೆ ಎಲ್ಲಿಲ್ಲದ ಒಟ್ಟೇಕಿಚ್ಚು. "ಲೋ ಮುದ್ದ!. ಕಾಂಪೋಂಡಾಗೆ ಉಲ್ಲುರಾಸಿ ಬಿದ್ದೋಗೈತೆ. ಮಳೆಬಳೋಂಗಾಗದೆ - ನೆನ್ಕೋಗ್‌ಬುಡ್‌ತೈತೆ-ದನದ ಕೊಟ್ಟಿಗೇಲಿ ಒಸಿ ಅಡುಕ್‌ಬುಟ್ ಓಗೋ" ಅಂತಾರೆ. ನಾನಿದ್ದವನು ಕತ್ತಲೆಬುದ್ಧಿ. ಉಳ ಉಪ್ಟೆ ಕಚ್‌ಗಿಚ್‌ಬುಟ್ಟೇತು-ಒತ್ತೀನೇ ಬಂದದ್ದೇ ಎತ್ತಾಕ್ ಬುಡ್ತೀನಿ ಅಂತಂದ್ರೆ-ಓಗೋ ಮುಟ್ಠಾಳ-ಅಂತಾರೆ-ಲಾಟೀನಾರಾ ಕೊಡಿ ಬುದ್ಧಿ-ಹಚ್ಚಿಸ್ಕೋತೀನಿ-ಅಂತ ಏಳಿದ್ರೆ-ಅಲ್ಲವೋ ಯಾತಮನೆ ಆಳ್ ಮಾಡಬೇಕೊಂತ್ಲೋ-ಮೂರುಕಾಸು ಉಲ್ ಎತ್ತಾಕೋಕೇ ಒಂಬತ್ತು ಕಾಸು ಎಣ್ಣೆ ಕರ್ಸುಮಾಡ್ತೀಯೇನಾ-ಓಗು-ಪಕ್ಕದಮನೆ ಕಾಂಪೋಂಡು ಅರುಗಾಗೆ ಸೊಪ್ಪುಸದೆ ಎಲ್ಲಾ ಬುದ್ದೈತೆ-ಕೂಡಾಕಿ-ಬೆಂಕಿ ಒತ್ತಿಸಿ ಬೆಳಕು ಮಾಡ್ಕೋ ಅಂತಾರೆ." ಒಲೆ ಒತ್ತಸೋಕ್ಕೆ ಎಣ್ಣೆ ಬೇಡ-ದೀಪದ ಕಡ್ಡಿ ಕರ್ಚಾಯ್ತದೆ-ನೆರೆಮನೆಯಾಗ್ನಿಂದ ಬೆಂಕಿ ತಂದು ದಿನಾ ಒಲೇ ಒತ್ತಿಸು ಅಂತ ಕಾಡ್ತಾರೆ ಆ ನಾಗೊಮ್ಮನ್ನ-" ಅಪ್ಪೋ ಬುದ್ರವ ಈ ಬುಪ್ಪನ ಕೆಲ್ಸಾವು. ಜಲುಮ ಜಲುಮಕ್ಕೂ ಇಂತೇ ನಾವು ಬುರು ಉಟ್ಟೆ ಬೇಡವು ತಾಯಿ-ಉಟ್ಟ್ಬೇಡವು. ಎಲ್ಲಾರನೂ ಕಾಪಾಡು

ಬಾಯಾಗ್ ಆಕ್ಕೋತ್ತಾನೆ-ನವ್ರಪ್ಪ. ಬೋ ಜುಪುಣ-ಬೋ ಜುಪುಣ. ಆದಿರ್ಲಿ.

ಅವ್ವೋ! ಈಟೆಲ್ಲಾ ಕೆಲಸ ಆಯ್ತು ಅನ್ನಿ- ಅಲ್ಲಿಗೂ ಸಮಾಧಾನ ಇಲ್ಲ ಎಲ್ಲಾದರನೋಕ್ಕೆ ಮನೆಗೋಗೊದಕ್ಕೆ ಮುಂಚೆ ಒಂದು ಚಿಲ್ಲರೆ ಸಾಕರಿ ಬೇರೆ "ಲೋ ಮುದ್ದ! ಮನೆಗೆ ಓಯ್ತೀಯಲ್ಲಾ ಅಂಗೇ ದಾರೀಲಿ ಆ 'ನರರಿಶಾಸ್ತ್ರಿಗೋಳ್' ನಾನು ಬರೇಳ್ದೆ ಅಂತ ಏಳ್ ಬುಟ್ಟು-ಆಸೆ ಬೀದಿ ಸಂಗಪ್ಪನ್ನ ಬಡ್ಡಿ ಅಣ ಯಾವಾಗ ಕೊಡ್ತಾನೆ ಅಂತ ಕೇಳು. ಒಳ್ಳೆ ಮಾತ್ನಾಗೆ ಅಣ ತಂದೊಪ್ಪಿಸಿದ್ರೆ ಸರಿ-ಇಲ್ಲಿದ್ರೆ ದಾವಾ ಊಡಿ, ಮನೇಮಟಾ ಜಪ್ತಿ ಮಾಡಿಸ್ತೀನಿ ಅಂತ ಎದುರ್ಸ್ಬುಟ್ ಮನೆಗೆ ಓಗು. ಒತ್ತೀನೇ ಬರತಾ ರೋಟಾಗೆ ಒಸಿ ಉಪ್ಸೇಕಾಯಿ ಉದುರಿಸಿ ತತ್ತಾ, ಚಟ್ನಿ ಅರೆಯೋಕೆ" ಅಂತ ಬೇರೆ. ಸಾಕತ್ತಾ ಇವರ ಸಾಕರಿ.

ಸು:—ರಾತ್ರೆ ಅಷ್ಟು ಹೊತ್ತಿನಲ್ಲಿ ನೀನೊಬ್ಬನೇ ಹೋಗ್ತೀಯೋನೋ ಮುದ್ದ ಮನೇಗೆ? ಭಯಗಿಯಾ ಆಗೋಲ್ವೇನೋ? ಮಾರಿಗುಡಿ ಹಾದು ಹೋಗೋದಕ್ಕೇ? ಅಲ್ಲೆಲ್ಲಾ ಪಿಶಾಚಿಗಳು ಇವೆಯಂತಲ್ಲೋ?

ಮು:—ಆವ್ವೋ! ಸಂದಾಗಿ ಕೇಳಿದಿರಿ. ನಮ್ಮ ಎಜಮಾನರ ತಾವಾ ಪಳಕಾ ಆದೋರಿಗೆ ಪಿಸಾಸಿ ಬೇರೇ ಅಯ್ತೀನ್ರವ್ವಾ? ಇವರ ದರ್ಸನ ಆದೋರಿಗೆ ಪಿಸಾಸಿ ದರ್ಸನ ಬೇರೆ ಆಗ್ತೈತಾ ಏಳೀ ಮತ್ತೆ? ಇಂಗೆಲ್ಲಾ ಏಳ್ತಾನಲ್ಲಾ ಮುದ್ದ ಅಂತ ಬೇಸರಪಟ್ಕಕೋ ಬೇಡಿ-ನಮ್ ತಾಯಿ! ಏನಾದರೂ ಅವರು ನಿಮ್ ಅಣ್ಣಾದೀರೇ ಅಲ್ವಾ?

ಸು:— ಯಾತರ ಅಣ್ಣನೋ? ಬಿಡೋ ಮುದ್ದ! ನೀನು ಹೇಳೋದೆಲ್ಲಾ ಸರಿ ಕಾಣೋ. ಎಷ್ಟುದೂರ ಹೋಗಬೇಕೋಪ್ಪಾ? ನಾನೇ ಇದ್ದೀನಲ್ಲಾ-ಪ್ರತ್ಯಕ್ಷ ಅನುಭವಿಸ್‌ದೋವ್ರು. ಕೂಡ ಹುಟ್ಟಿದಪಾಡಿಗೆ ನಾನೂ ಏನೋ ಅಣ್ಣಾ-ಅಣ್ಣಾ ಅಂತ ಹೊಡೆಕೋತೀನಿ. ನಾಕ ಜನರ ದೃಷ್ಟೀಲಿ ಸಾಣ್ಯವಾಗಿ ಬಾಳಬೇಕಲ್ಲಾಂತ. ಇವೆಲ್ಲಾ ಸಂಸಾರದ ಗುಟ್ಟುಕಾಣೋ ಮುದ್ದ!

ಮು:—ಓದು ಏಳೀ ತಾಯಿ! ಯಾರಿಲ್ಲಾಂದೋರು? ಏನೋ ನನೊ
ವ್ವೋವ್ರು-ಪಾರ್ವತಮ್ಮನೋರು-

ಸು:— ಹೌದು-ಹೇಳೋ.

ಮು:—ಅವರಿರೋಗಂಟ-ನೋಡಿ ತಾಯಿ! ಮುದ್ದ! ಮುದ್ದ! ಅಂತ ಪರಾಣ
ಬುಟ್‌ಕೊಳ್ಳೋವ್ರು. ಎಜಮಾನ್ರಿಗೆ ಕಾಣ್ದಂಗೆ-ಏನಾರಾ ಒಸಿ ತಿಂ
ಪಂಡಿ-ಆಲು-ತುಪ್ಪ-ಎಲ್ಲಾ ಕೊಡೋರು. ನನ್ ಮಕ್ಕಳ್ ಸಾಕಿದೊ
ವ್ರೆ ಅವ್ರುತಾಯಿ! ತಂಪು ಒತ್ತಿನಾಗೆ ನೆನೀಬೇಕು ಅವರ್ನ. ಈಗೇನೈ
ತಾಯಿ ಮನೆಯಾಗೆ? ಅವರಿರೋವಾಗ ಅಣ-ಲಕ್ಸ್ಮೀಕಳೇ ಅನ್ನೊ
ದು ಅಂಗಿರೋದು ನೋಡಿ ಮನೆಯಾಗೆ! ಅಂಗೂ ನಾಳೇ ಸಾಯಿ
ತಾರೆ ಅನ್ನಿ. ಈವೊತ್ತು ಕರದ್ರು ನನ್ನ-ಆಸಿಗೆತಾವಾ ಕುಂಡರಸ್ಕೊಂಡು
"ನನಗೆ ಬಾಸೆಕೊಡು ಮುದ್ದ! ನೋಡು ಮುದ್ದಾ! ನೀನೂ ಬೋ
ನಂಬ್ಕೆಯಿಂದ ಇದ್ದೆ ನಮ್ ಮನೆಯಾಗೆ! ನಾನೂ ನಿನ್ನ ಮಗನಗಿಂತಾ
ಎಚ್ಚಾಗೇ ಕಂಡೆ. ನನ್ನ ಕಾಲಾನೂ ಮುಗೀತಾ ಬತ್ತು. ಎಜಮಾನ
ರೇನಾರಾ ಅಂದ್ರೆ ಮನಸಾಗ್ ಮಡಗ್‌ಬೇಡ. ನನ್ನೊಟ್ಟೇಲಿ ಉಟ್ಟಿದ
ಗಂಡೂ ಎಣ್ಣೂ ಏಡು ಪರದೇಶಿಗಳವೆ. ಇವ್ನೊಸಿ ಎತ್ತತಾಯಂತೆ
ನಂಬ್ಕೆಯಿಂದ ನೋಡ್ಕೋಪ್ಪ. ನಿಂಗೂ ದೇವರು ಒಳ್ಳೇದು
ಮಾಡ್ತಾನೆ" ಅಂತಂದ್ರು.

ಸು:—ಅಯ್ಯೋ! ಪಾರ್ವತಮ್ಮನೇ! ಇನ್ನಂಥಾ ಪುಣ್ಯವಂತೆ ಹುಟ್ಟತಾಳೆ.
ನೋ ಮುದ್ದ! ತನ್ನ ಜನಗಳು-ಆಳು-ಕಾಳು-ದಿಕ್ಕಿಲ್ಲದ ಪರದೇಶಿಗಳು-
ಅಂದ್ರೆ ಅವಳ ಕನಿಕರ-ಅಷ್ಟಿಷ್ಟೊಂತ ಹೇಳಿತೀರದಪ್ಪಾ! ಕೊನೇಗೆ
ಅವಳಿಗಿಲ್ಲದಿದ್ರೂ ಸರಿ ಎತ್ತಿಕೊಟ್‌ಬಿಡೋವ್ಳು. ಚಿನ್ನದಂತ ಹೃದಯ.
ನೊಂದ ಬಾಯಲ್ಲಿ ಒಬ್ಬರ್ನ ಒಂದು ಮಾತಂತಿರಲಿಲ್ಲ. ಆ ಪ್ರಾಣೀ
ಹಾಗೂ ಯಾರಾದರೂ ಯಾಚಕಕ್ಕೆ ಹೋಗಿ ನನಗೆ ಗತಿ ಇಲ್ಲಾಂತಂದ್ರೆ
ಎಲೇಲಿರೋ ಅನ್ನ ಹಾಗೇ ಎತ್ತಿ ಕೊಟ್ಟುಬಿಡೋವ್ಳು-ದುಃಖಪಡೋ
ವರನ್ನ ಕಂಡರೆ ಗೊಳೋಂತ ತಾನೂ ಅತ್ತುಬಿಡೋವ್ಳು-ಒಳ್ಳೆ ಆತ್ಮ!
ಅದಕ್ಕೇಪ್ಪಾ-ಈ ಪಾಪಿ ಪ್ರಪಂಚ ಬೇಡ ಅಂತ ಅವಳು ನಡೆದು
ಬಿಟ್ಟದ್ದು.

ಮು:—ಅಟ್ಟೆಲ್ಲದೇನವ್ವ? ಅವ್ರೋವ್ರು ಅಂಗಂದದ್ಕೆ-ಥೂ-ಎತ್ತ ತಾಯಿಗಿಂತ ಎಚ್ಚೆ ? ಇವರ ಮಾತಿಗಿಂತ ಅಣಾ ಒಂದುದೋಡ್‌ದಲ್ಲ. ಅಂತ ಏಳ್ಬುಟ್ಟವನು-ಅವರ ಮಕ್ಕಳ ಮೊಕನೋಡ್ಕೊಂದು ಈಟು ದಿನಾನೂ ಅವರ ಮನೆಯಾಗೇ ಇವ್ನಿ-ಅಲ್‌ಕಚ್‌ಕೊಂದು. ಇಲ್ದೆ ಓದ್ರೆ ಎಂದೋ ನಡೆದುಬಿಡ್ತಾ ಇದ್ದ ಆಸೇಗೇ.

ಸು:—ಈಶ್ವರಪ್ಪಸಿಗೆ ಮದುವೆಯಂತಲ್ಲಾ ಹೌದೇನೋ ಮುದ್ದ ?

ಮು:—ಔದು ತಾಯಿ. ಅದ್ಯಾಕ್ ನಿಮುಗ್‌ಗೊತ್ತಿಲ್ಲವ್ರಾ ?

ಸು:—ನೋಡೋ ಮುದ್ದ ! ನಿಂಗೊತ್ತಿರೋಷ್ಟೂ ನಂಗೊತ್ತಿಲ್ಲಾಪ್ಪಾ ! ನಿಮ್ ಎಜಮಾನ್ರು ಏನಾದ್ರೂ ಹೇಳ್ತಾರೇನೋ ಮುದ್ದ ನನ್ನ ಹತ್ತರ ? ಹಾಗೂ ನೋಡ್ತೀಯಾ ನಾನೊಬ್ಬಳೇ ತಂಗಿ. ಏನೋ ಕೂಡ ಹುಟ್ಟಿದ ಪಾಪ ! ಕರುಳಿನ ಸಂಬಂಧ ! ಬಾಧಿಸುತ್ತೆ ನೋಡು. ನಾನೂ ಅಣ್ಣಾ ! ಅಣ್ಣಾ ! ಅಂತ ಹೊಡಕೋತೀನಿ-

ಮು:—ಸರಿ ಕಾಣ್ರವ್ವಾ !

ಸು:—ಯಾರ ಮಗಳೋ ?

ಮು:—ಇದ್ಯಾಕ್ರವ್ವಾ ? ಆನರರಿಸಾಸ್ತ್ರಿಗೋಳಿಲ್ವಾ ಮೇಗಣ ಬೀದಿಯಾಗೆ ? ಅವರೆಣ್ಣು ಸಾರದೊವ್ವ. ಬೋ ಲಕ್ಷಣವಾಗೈತೆ ತಾಯಿ ಎಣ್ಣು ! ನಮ್ಮ ಈಸ್ವರಪ್ಪನಿಗೆ ಸರಿಯಾದ ಜೋಡಿ-ಸೈಕೋಲು ಎಲ್ಲಾ ತೆಕ್ಕೊಡ್ತವರಂತೆ ಮದುವೇ ಗಂಡಿಗೆ.

ಸು:— ಸೈಕೋಲು ! ಸೈಕೋಲು ಅಂದ್ರೇನೋ ?

ಮು:—ಸೈಕೋಲವ್ವಾ ! ಎಲ್ಡ್ ಚಕ್ರದ್ದು ಗಾಡಿ-ಉಸಿರ್ ತುಂಬೈತಲ್ಲ-ಚಕ್ರದಾಗೆ-ಅದು-ಸವಾರಿ ಮಾಡೋಕೆ !

ಸು:— ಸರಿ. ಸರಿ. ಅದ್ಯಾಕೋ ? ಶ್ಯಾಮರಾಯರ ಮಗಳು ಕಮಲೂನ ತಂದು ಮದುವೆ ಮಾಡಬೇಕೂಂತ ಅಂತಿದ್ರಲ್ಲೋ ಪಾರ್ವತಮ್ಮನಿದ್ದಾಗ ?

ಮು:—ಅದೆಲ್ಲಾ ಅವರೊಂದಿಗೇ ಓಯ್ತ್ರವ್ವಾ ! ಅಂಗೂ ಸಾಮರಾಯರಿಗೆ ಅಣ ಅಯ್ತೋನ್ರವ್ವಾ ? ಅವರೆಣ್ಣು ತಂದುಕೊಳ್ಳಾಕೆ ? ಯಜಮಾನ್ರ ತಂತ್ರ

ನಿಮಗ್ ಗೊತ್ತಿಲ್ಲ ಅನ್ರಿ ಅಂಗಾರೆ? ಈ ನರರಿಸಾಸ್ತ್ರಿಗೋಳವರಲ್ಲಾ-
ರಿಗಿರೋದು ಒಂದೇ ಎಣ್ಣು. ಗಂಡುಸಂತತಿ ಇಲ್ಲ. ಅದ್ಕೆ ಈ ಎ
ತಂದ್ಕೊಂದ್ರೆ ಅವರಪಾರ ಆಸ್ತೀನೂ ಇವರ ಮನೇಗೆ ಸೇರ್‌ಕೋತ್ತೆ
ಅಂತಾ ಯಜಮಾನರ ಪಳಾನು! ಇದರ ಮೇಕ್ಕೆ ಕೈಯಾಗ್‌ಕೊಡೆ
ಆಣಾಸೂ ಕೊಟ್ಟು-ಏತ್ ಮದುವೇ ಕರ್ಸೂ ಸಾಸ್ತ್ರಿಗೋಳೇ ಒಯ
ಕೊಳ್ಳೋಂಗೆ ಒಪ್ಪಂದ.

ಸು:—ಸರಿ. ಇನ್ನೇನು ಗಂಗಾಧರನಿಗೆ ಕಮ್ಮಿ? ಬೇಡ-ಬೇಡ-ಅಂದ್ರೂನ
ಯಾವುದಾದರೂ ಒಂದು ಬಂದು ಸೇರತಾನೇ ಇದೆ-ಇವನಾಸ್ತಿ ಹೆಚ್ಕೊ
ಎಷ್ಟು ಬಂದ್ರೇನಪ್ಪಾ? ಬರೋದೆಲ್ಲಾ ಬರಲಿ ಅಂತಾನೆ. ಬಳಿ
ಬಾಚುಕೋತಾನೆ. ನ್ಯಾಯವಾಗಿ ಯಾರಿಗಾದ್ರೂ ಕೊಡಬೇಕಾ
ಮ್ಮನಸ್ಸು ಬರೋಲ್ಲ ಕೊಡೋಕೆ. ಹೆಣಗಾಡಿಸ್ತಾನೆ-ಕೊಟ್ಟವರ ಒಡ
ತಿರುಗಿಸಿ ಕೊಡಬೇಕೊಂದ್ರೆ ಅವನ ಕಣ್ಣಿನಲ್ಲಿ ರಕ್ತ ಬಂದು ಬಿಡುತ್ತ
ನೋಡು.

ಮು:—ಔದ್ರಪ್ಪಾ!

ಸು:—ಅದಿರಲಿ ಮುದ್ದ! ಆ ನಾಗೂಬಾಯಿ!

ಮು:—ಅಡಿಗೆ ಮಾಡೋವ್ಳು!

ಸು:—ಹೌದು. ಅವಳದೊಂದು ಐನೂರು ರೂಪಾಯಿ ತಕ್ಕೊಂಡು ಬಡ್ಡಿ
ಸೇರಿಸಿ ಮಗನ ಮದುವೇಗೆ ಕೊಡತೀನಿ ಅಂದಿದ್ರಲ್ಲ-ನಿಮ್ಮೆಜಮಾನರು

ಮು:—ತಿಳಿಯೋದ್ರಪ್ಪ! ಆ ನಾಗಮ್ಮನ ಮಗ ಮನೆಯಾಗೇ ಇದ್ನಲ್ಲವ್ವಾ
ಈಟುದಿನಾನೂ. ಆ ನಾಗೊವ್ವ ಮನೆಯಾಗಿರೋದ್ನೆಲ್ಲಾ ಎತ್ತುಕೊಟ್
ಬುಡ್ತಾಳೆ ಮಗನ್ಗೆ ಅಂತ ಅಟ್‌ಬುಟ್ರು-ಆಸೇಗೆ. ಆ ಉಡುಗನ್ನ
ಈಗ ಅಡೆಲ್ಲೊ ಅವ್ನಂತೆ-ಅನಾತಾಲಯದಾಗೆ-ಮನೆಯಾಗಿರಬೇಡ್ಡು
ಅಂತ ಎಜಮಾನರ ಮನದಾಗೆ. ಉಡುಗ ಓದ್ಕೊಳ್ಳಿ-ಇಲ್ಲದೀರ ಓವ್ತೆ
ಕೆಟ್ಟು ಓಯ್ತಾನೆ ಅಂತ ಒರಗಡೆ ಆಯೊವ್ವನತಾವಾ ಏಳೋದು. ಈ
ನಾಗವ್ವನಿಗೂ ಮೋಸ ಮಾಡಬೇಕೊಂತ ಏರ್ಪಾಟು.

ಸು:—ಹಾಗೇನು?

ಹು:—ಅಲ್ಲದೇನಪ್ಪಾ? ಯಾವಾಗ ಆಯೊಪ್ಪ ಕೇಳಿದ್ರೇನೂ ತಡಿ-ಈಗೇನವ ಸರ? ಏನ್ ಮಾಡ್ತೀಯಾ ಅಣ ಇಕ್ಕೊಂದು? ನಿನ್ನ ತಾವಿದ್ರೆ ಕರ್ಸಾ ಗೋತೈತೆ. ನಿನ್ನ ಐನೂರು ಸಾವಿರ ಆಗ್ ತೈತೆ. ಅಂತೆಲ್ಲಾ ಏಳ್ತಾರೆ.

ಸು:— ಅವಳು ಪತ್ರ ಬರೆದುಕೊಡೂಂತ ಕೇಳಿದಳಂತಲ್ಲ.

ಮು:—ಔದು. ಆದಕ್ಕಂದ್ರು-ಪತ್ರ್ಯಾಕೆ? ನನ್ನ ಮಾತಿನಾಗೆ ನಂಬಿಕೆ ಇಲ್ವಾ? ನಾನೇನು ಓಡೋಯ್ತೀನಾ? ನಿನ್ನ ತಾವ ಸಾಲ ತಕ್ಕೊಂಡೀವ್ನಾ? ನಿನ್ನ ಅಣ ನಾನು ಬಡ್ಡೀಗೆ ಆಕೀವ್ನಿ-ಬೇಕಾದಾಗ ಬತ್ತೈತೆ-ಮನೆಯಾಗ ಇದ್ದಬದ್ದ ಸಾಕರೀ ಮಾಡ್ಕೊಂದು ತಿಂದ್ಕೊಂದು ಬುದ್ದಿರು-ಅಂತ. ಅವ್ವೋ! ನೋಡಿದ್ರಾವ್ವಾ?

ಸು:—ಮುದ್ದ! ಹೋಗಲಿ ಬಿಡಪ್ಪಾ "ಮಾಡಿದೋರಪಾಪ ಆಡಿದೋರಬಾಯಲ್ಲಿ" ಅಂತ. ಈಗ ಸದ್ಯ ನನ್ನ ಮಗಳ ಮದುವೆ ಏರ್ಪಾಡಾಗಿದೆ. ನನ್ನ ಹಣದಲ್ಲಿ ಒಂದು ಐನೂರು ರೂಪಾಯಿ ಕೊಡು ಅಂತ ಕೇಳಬೇಕು ನಿಮ್ಮ ಎಜಮಾನರನ್ನು. ಏನು ಹೇಳ್ತಾರೋಪ್ಪ.

ಮು:—ಅವ್ವೋ! ಅವರ್ ತಾವಾಸಿಗಾಕ್ಕೊಂಡ್ರೆ ಆಯ್ತು ಬಿಡಿ. ಆಸೇಕ್ಕೆ. ಅಣ ವಾಪಸ್ಸು ಬಂದಂಗೆ. ಎಂಗೋ ಒಸಿ ಗಾಡಗಾಡನೆ ತರದೂದ್ ಮಾಡೀವ್ನಾ. ಆಸೇಕ್ಕೆ ಮೊದಲಿಗೇ ಮೋಸ ಬಂದುಬುಟ್ಟೇತು.

ಸು:— ನನಗ್ಯಾಕೋ ಬಹಳ ಭಯವಾಗಿದೆಯಪ್ಪ. ಅವರಿವರು ಹೇಳೋದು ನೋಡಿದ್ರೆ. ಹೂಂ! ಕೂಡ ಹುಟ್ಟಿದ ಅಣ್ಣ! ಅವನು ಬೇಕಾದ್ರೆ ನನ್ನ ಮೇಲೂ ದಾವಾ ಹಾಕಿಬಿಡ್ತಾನೆ. ಆದಕ್ಕೂ ಅವನು ಹೇಸೋದಿಲ್ಲ. ಅಂದ್ರೆ ಸದ್ಯದಲ್ಲಿ ನನ್ನ ಹಣ ಅವನಿಗೆ ಕೊಟ್ಟಿದ್ದೇನಷ್ಟೆ. ಅವನಿಂದ ತರಲಿಲ್ಲ- ಬದುಕಿದೆ. ನೋಡು-ಬೋ ನಿರ್ದಾಕ್ಷಿಣ್ಯ ಕಾಣೋ ಮುದ್ದ! ಬೋ ನಿರ್ದಾಕ್ಷಿಣ್ಯ!

ಮು:—ಅವ್ವೋ! ನಾನಚ್ಚಾಟೀಸಿಗೆ ಓಗ ಬತ್ತೀನಿ. ಮನೆಕಡೆ ಓಯ್ತೀರೇನೋ ನಡೀರವ್ವ. ಮಾತುಕತೆ ಆಡಿ. ಅಣಾಬರೋದಾರಿ ನೋಡ್ರವ್ವೊ!

ದೃಶ್ಯ ೩] [ಸ್ಥಾನ : ಗಂಗಾಧರನ ಮನೆ.

(ಪಾತ್ರಗಳು : ಗಂಗಾಧರ: ಮುದ್ದ : ಸುಬ್ಬಮ್ಮ : ಶ್ಯಾಮರಾಯ)

ಗಂಗಾ :—(ಸ್ವಗತ) ಹೌದು. ಈ ಸುಬ್ಬು ಹಣಕ್ಕೆ ಬಡ್ಡಿ ಬೆಳೀತಾ ಇದೆ. ನಿಜ. ಆದರೇನು ? ಇಲ್ಲ, ಇಲ್ಲ ಅಂತಲೇ ಹೇಳತಾ ಇರಬೇಕು ಇವ ಳಿಗೆ. ಇಲ್ಲದಿದ್ದರೆ, "ಅಸಲೇ ಕೊಟ್ಟುಬಿಡು" ಅಂತ ಉಪದ್ರವ ಮಾಡ್ತಾಳೆ. ಇರಲಿ. ಏನಾದ್ರೂ ಮಾಡಿ ಇವಳ ಹಣಕ್ಕೆ ಚಕ್ಕರ್ ಹಾಕಬೇಕು. ಏನೋ ಕೇಳಿದಾಗ ಒಂದಷ್ಟಿಷ್ಟು ಬಿಸಾಕಿದರೆ ಸಾಕು. ತೆಪ್ಪಗಾಗತಾಳೆ. ಇವಳಿಗ್ಯಾಕಂತೆ ದುಡ್ಡು ?

(ಪ್ರವೇಶ: ಸುಬ್ಬಮ್ಮ)

(ಪ್ರಕಾಶ) ಬಾ ಸುಬ್ಬು ! ಏನು ಇತ್ತಕಡೆ ಬರೋದೇ ಅಪರೂಪ ಆಯಿತಲ್ಲಾ ?

ಸು :—ಬರದೇನಣ್ಣಾ ? ದಿಕ್ಕಿಲ್ಲದ ಹೆಣ್ಣು ಅದೊಂದಿದೆಯಲ್ಲಪ್ಪಾ ! ಆ ಪರ ದೇಶಿ ಮಗು ! ಅದರ ಕೊರಳಲ್ಲಿ ಒಂದು ತಾಲಿ ಬಿದ್ದರೆ ಸಾಕೂಂತ ನಾನೂ ಒದ್ದಾಡತಾ ಇದೇನಪ್ಪ. ಕೊನೆಗೆ ಆ ವೆಂಕಟರಾಯನಿಗೇ ಕೊಟ್ಟು ಮದುವೆ ಮಾಡಿಬಿಡೋದು ನಮ್ಮ ಸರಸೂನಾ ಅಂತ ತೀರ್ಮಾನ ಮಾಡಿಬಿಟ್ಟೇಣ್ಣಾ !

ಗಂ:—ಯಾವ ವೆಂಕಟರಾಯನೇ ?

ಸು:—ಅದೇಣ್ಣಾ ! ಶಿವರಾಮಯ್ಯನವರ ಕಿರೀಮಗ. ಈಶ್ವರನ ಜೊತೇಲಿ ಕಾಲೇಜಿನಲ್ಲಿ ಓದ್ತಾ ಇದ್ದಾನಲ್ಲ. ಅವರೂ ಸಾಯೋದಕ್ಕೆ ಮುಂಚೆ ಅಂತಾ ಇದ್ರು. ನಮ್ಮ ಸರಸೂನ ವೆಂಕಟರಾಯನಿಗೇ ಕೊಟ್ಟು ಮದುವೆ ಮಾಡಿಬಿಡೋದೂಂತ. ಏನೋ ಅವರ ಇಷ್ಟವೂ ನೆರವೇರಿ ದಹಾಗೆ ಆಗಲೀಂತ.

ಗಂ:—ಏನಿದೆಯೇ ಶಿವರಾಮಯ್ಯನಿಗೆ ? ನೆಟ್ಟಗೆತಿನ್ನೋದಿಕ್ಕೇ ಗತಿ ಇಲ್ಲ ನನ್ನ ಹತ್ತಿರ ಹಿರೀಮಗನ ಮದುವೇಗೆ ತಕ್ಕೊಂಡ ಸಾಲಾನೇ ಇನ್ನೂ ಕೊಟ್ಟಿಲ್ಲ. ಇನ್ನೀ ಮದುವೆಗೆ ಬೇರೆ ಸಾಲ ಮಾಡಿಬಿಟ್ಟಾಂದ್ರೆ ನನ್ನ ಹಣ ಬಂದಹಾಗೇ ಆಯಿತು. ನಾನೂ ಬಹಳ ಪರದಾಡ್ತಾ ಇದ್ದೀನಿ.

ನೋಡು ಸುಬ್ಬು! ಕೊಡೋವ್ರು ಒಬ್ಬರಾದರು ಒಂದು ಬಿಡಿಕಾಸು ತಂದು ಕೊಡದಿದ್ರೆ ಹೇಗೇಂತ?

ಸು: ಇರಲೀಣ್ಣಾ! ಏನೋ ಪಾಪ! ಅವರಿಗೂ ತಾಪತ್ರಯಗಳು. ಬಡವ ನಾದ್ರೂ ಹುಡುಗ ಜಾಣ. ಏನೋ ಬಿ. ಎ. ಅಂತ ಒಂದು ಓದ್ತಾ ಇದ್ದಾನಲ್ಲ. ಆದಕ್ಕೇನಾದ್ರು ಸ್ವಲ್ಪ ಸಹಾಯ ಮಾಡಿದ್ರೆ ಆಯಿತು. ಹುಡುಗ ಅದೊಂದು ಪರೀಕ್ಷೆ ಪ್ಯಾಸ್‌ಮಾಡಿನಾಂತಂದ್ರೆ–ತಾನೂ, ತನ್ನ ಹೆಂಡತಿ, ಏನೋ ಇದ್ದಿದ್ರಲ್ಲಿ ಜೀವನಾ ಮಾಡಿಕೋತಾರೆ.

ಗಂ: ಸರೀನ್ನು.

ಸು: ಅಣ್ಣಾ! ಅವತ್ತು ಹೇಳಿದೆನಲ್ಲಾ ಮದುವೆಗಾಗಿ ನನ್ನ ಹಣದಲ್ಲಿ ಒಂಕೈ ನೂರಾದ್ರೂ ಜೊತೆಮಾಡಿ ಕೊಡೂಂತ. ಇಲ್ಲದಿದ್ದರೆ ವಿಧಿಯಿಲ್ಲ ನೋಡು. ಅಸಲು ಒಡ್ಡಿಯೆಲ್ಲಾ ನಿಧಾನವಾಗಿ ಲೆಕ್ಕ ಹಾಕ್ಕೋ ಬೇಕಾದ್ರೆ.

ಗಂ: ಹುಣಿಸೇಬೀಜವೇನೆ? ಎಲ್ಲಿಂದ ಬರಬೇಕೇ ಈಗ? ಅದರಲ್ಲೂ ಆವಾ ಗಿಷ್ಟು, ಈವಾಗಿಷ್ಟು–ಅದೆಷ್ಟೆಷ್ಟೋ ತಕ್ಕೊಂಡಿದ್ದೀಯಲ್ಲಾ. ಇನ್ನೂ ನಾನು ನಿನಗೆ ಬಾಕಿ ಕೊಡಬೇಕಾಗುತ್ತೇನು? ಅದೇನೋಮ್ಮ. ಈಗ ವಿರಾಮವಿಲ್ಲ. ಲೆಕ್ಕ ನೋಡಬೇಕು.

ಸು: ಇದೇನಣ್ಣಾ! ಹೀಗೆ ಹೇಳುವೆ? ಕಂಪೆನೀವರಿಂದ ಇನ್ಷ್ಯೂರೆನ್ಸು ವಾರಸ್ಸು ಹಣ ೨,೫೯ಲ ರೂ. ನೀನೇ ವಸೂಲು ಮಾಡಿದೆ. ಇದಕ್ಕೆ ನೂರು ರೂಪಾಯಿ ಬೇರೆ ಖರ್ಚುಮಾಡಿದೆ ಅಂತಂದೆ ಒಂದುಕಾಸೂ ಕರ್ಚುಮಾಡಬೇಕಿಲ್ಲಾಂದ್ರೂ ಆ ಕಂಪೆನಿ ಏಜೆಂಟ್ರು. ಹೋದರೆ ಹೋಗಲಿ. ನಿನ್ನ ಮಾತಿನಂತೆ ೨,೫೯ಲ ರೂಪಾಯಲ್ಲಿ ೧೦೦ ಹೋದ್ರೆ ೨,೧೯ಲ ರೂ. ...ಆಯಿತು. ಇವತ್ತಿಗೆ ಸರಿಯಾಗಿ ನಾಲ್ಕು ವರ್ಷದ ಮೇಲೆ ಮೂರು ತಿಂಗಳಾಯಿತು. ನಮ್ಮ ಭೀಮು ಎಲ್ಲಾ ಲೆಕ್ಕಾ ಬರೆ ದಿಟ್ಟಿದ್ದಾನೆ.

ಗಂ:—ಸರಿ. ಒಪ್ಪಿಕೊಳ್ಳೋಣ. ಆಮೇಲೆ?

ಸು:—ಇದರಲ್ಲಿ ನೋಡು; ಕರ್ಮದ ಕರ್ಚು–ದಿವಸಗಳಿಗೆ ಮಾಡಿದ್ದು, ಎಲ್ಲಾ ಒಟ್ಟು ಒಂದು ೩೮೭ ರೂಪಾಯಿ ಕೊಟ್ಟಿದ್ದೀಯೆ. ಈ ಮೂರು ವರ್ಷ

ದಲ್ಲಿ ೧೮೫ ರೂ. ಬೇರೆ ನಗದು ಕೊಟ್ಟಿದ್ದೀಯೆ. ನನ್ನ ಹಣಕ್ಕೂ ಬಡ್ಡಿ ಬೆಳದಿರಬೇಕಲ್ಲವೆ ?

ಗಂ: ಆಮೇಲೆ ಹೇಳು.

ಸು: ಅದೇಣ್ಣಾ ! ಈಗೇನಿಲ್ಲಾಂದ್ರೂ ನನ್ನ ಬಾಬತ್ತು ಎರಡು ಸಾವಿರ ರೂಪಾಯಿ ಚಿಲ್ಲರೆ ಇರಬೇಕೂಂತ ಆಗುತ್ತಲ್ಲವೆ ? ಅದರಲ್ಲಿ ಒಂದ್ಯೆನೂರು ರೂಪಾಯಿ ಕೊಡೂಂದೆ. ಸಮುಃಸುಕ್ಕಿಲ್ಲದಿದ್ರೆ ! ಆಮೇಲೆ ಬೇಕಾದ್ರೆ ಲೆಕ್ಕ ಹಾಕ್ಕೋ ನಿಧಾನವಾಗಿ–ನನ್ನ ಬಾಕೀ ಹಣಾನೆಲ್ಲಾ ಆ ಮೇಲೆ ಕೊಡು. ನಾನೆಲ್ಲಿಯಾದ್ರೂ ಬ್ಯಾಂಕಿನಲ್ಲಿಟ್ಟುಕೋತೀನಿ. ನಿನಗ್ಯಾಕೆ ತೊಂದ್ರೆ ?

ಗಂ: ಇದೇ ನೋಡು. ಅಲ್ಲಾ ಕಾಣೆ ಸುಬ್ಬು ! ನಾನು ಮೊದಲೇ ಬೇಡಾಂದೆ. ಸುಮ್ಮನೆ ನನಗ್ಯಾಕೆ ತಗಾದೆ ? ನೀನೇ ಎಲ್ಲಿಯಾದರೂ ಭದ್ರವಾಗಿ ಟ್ಟುಕೋ ನಿನ್ನ ಹಣವನ್ನಾಂದೆ. ಕೇಳಲಿಲ್ಲ. 'ನಾನು ಹೆಣ್ಣು ಹೆಂಗಸು. ಹಣದ ವ್ಯವಹಾರ ನನಗ್ಗೊತ್ತಿಲ್ಲ. ನೀನಾದರೂ ಬಡ್ಡಿ ವ್ಯಾಪಾರ ಮಾಡತಕ್ಕವನು- ಸರಿಯಾದ ಲೇವಾದೇವಿ ಮಾಡಿ ಬಡ್ಡಿ ಬೆಳಸಿ ಕೊಡೂಂದೆ.' ಆಗಲೀಂತಂದೆ. ಈಗ ನೀನು ಹೇಳೋದು ನೋಡಿದ್ರೆ !

ಸು: ಯಾಕಣ್ಣಾ, ಹಾಗಾದ್ರೆ ?

ಗಂ: ಅಲ್ಲವೆ, ಸುಬ್ಬು ! ಕಾಲ ಹೇಗಿದೇಂತ ಈಗ ? ಅಲ್ಲವೆ, ಬಿತ್ತಿದ ಹುಣಿಸೇ ಬೀಜವೆಲ್ಲಾ ಗಿಡವಾಗಿ ಮರವಾಗುತ್ತೇನೇ ? ಅದರಲ್ಲಿಯೂ ಅವರವರ ಅದೃಷ್ಟ ನೋಡು !

ಸು: ಹಾಗೆಂದಮೇಲೆ ? ಏನೂ ಇಲ್ಲಾಂತಲೋ ?

ಗಂ: ಛೇ ! ಛೇ ! ನೋಡು ಇದೇ ಬುದ್ಧಿಯಿಲ್ಲದವಳೂ ಅನ್ನೋದು !

ಸು: ಹೌದಣ್ಣಾ ! ಸತ್ಯವಾಗಿ ಹೇಳಿದೆ. ಇನ್ನೂ ಒಂದು ಸಾವಿರಸಲಹೇಳು. ಒಪ್ಪುಕೋತೀನಿ.

ಗಂ: ಅಲ್ಲವೆ, ನೀನು ಹಣ ಕೊಟ್ಟಕಾಲದಲ್ಲಿ ಬಡ್ಡಿದರ ಚೆನ್ನಾಗಿತ್ತು. ಶೇಕಡೆ ಹನ್ನೆರಡರಂತೆ ಗಿಟ್ತಾ ಇತ್ತು. ಈಗ ಹ್ಯಾಗಾಗೋಗಿ

ಬಿಟ್ಟಿದೆ ಕಾಲಾಂತ ! ಒರಬರತಾ ಬಡ್ಡಿದರವೆಲ್ಲಾ ಬಹಳ ಇಳಿದು ಹೋಗಿದೆ ನೋಡು. ಮೊನ್ನೆ ಒಬ್ಬ ಟೊಪ್ಪಿ ಹೆಂಗಸು ೫,೦೦೦ ರೂಪಾಯನ್ನು ಒಂದು ದೊಡ್ಡ ಬ್ಯಾಂಕಿಗೆ ತಕ್ಕೊಂಡು ಹೋಗಿ ಡಿಪಾಸಿಟ್ ಇಟ್ಕೊಳ್ಳೀಂತ ಕೇಳಿದ್ಲಂತೆ. ಬ್ಯಾಂಕಿನವರಿದ್ದುಕೊಂಡು ಶೇಕಡ ಎರಡರಂತೆ ಬಡ್ಡಿ ಕೊಡ್ತೀವಿ-ಇಷ್ಟವಿದ್ರೆ ಇಡು ಅಂದ್ರಂತೆ ಅವಳಿದ್ದುಕೊಂಡು 'ನಾನು ಹೆಣ್ ಹೆಂಗಸು-ಇಷ್ಟು ಹಣ ಮನೇಲಿ ಯಾರು ಕಾವಲು ಕಾಯೋರು ? ನೀವು ಬಡ್ಡಿ ಕೊಟ್ರೆ ಕೊಡಿ-ಬಿಟ್ರೆಬಿಡಿ. ಸದ್ಯಕ್ಕೆ ನನ್ನ ಹಣ ಭದ್ರವಾಗಿ ಇಟ್ಟಿರಿ'' ಅಂದ್ಲಂತೆ! ಹೀಗಿರೋವಾಗ ನೀನು ಹೇಳೋಮಾತು ನೋಡು ಹೇಗಿದೆ? ನಿನ್ನ ಹಣ ಒಬ್ಬನಿಗೆ ಸಾಲ ಕೊಟ್ಟಿದೇನೆ.

ಸು:—ಯಾರಿಗೆ ಹೇಳು.

ಗಂ:—ಯಾರಿಗಾದರೆ ನಿನಗೇನೇ ಸುಬ್ಬು !

ಸು:—ಹಾಗಾದ್ರೆ ಇಂತಹವರಿಗೇಂತ ಹೇಳಬಾರದೇನಣ್ಣಾ ?

ಗಂ:—ಹೌದು. ಆಮೇಲೆ ನೀನು ಹೋಗಿ ಅವನ ಹತ್ತಿರ ಪ್ರಸ್ತಾಪ ಮಾಡೋದು. ಹೆಂಗಸಿನ ಹಣ ಅಂತ ಅವನು ಚಕ್ಕರ್ ಸುತ್ತಿಬಿಡಲಿ—ನೆಟ್ಟಗಾಗುತ್ತೆ ಆಗ ನಿನ್ನ ವಿದ್ಯಮಾನ !

ಸು:—ಸರಿಯಾಗಿದೆ

ಗಂ:—ನಿನ್ನ ಹಣ ಸಾಲ ತಕ್ಕೊಂಡಿದ್ದಾನಲ್ಲಾ—ಅವನಿಗೆ ಈಗ ಸ್ವಲ್ಪ ಮುಗ್ಗಟ್ಟು ಬಂದಿದೆ. ವ್ಯಾಪಾರದಲ್ಲಿ ನಷ್ಟ. ತಕ್ಷಣ ನಿನ್ನ ಹಣ ಹುಟ್ಟೋಹಾಗಿಲ್ಲ.

ಸು:—ಅಣ್ಣಾ ! ಹಾಗಾದರೆ ಹಣವು ...ಹೋಯಿತೂನ್ನು !

ಗಂ: — ಯಾತಕ್ಕೆ ಸುಬ್ಬು ಹೀಗೆ ಘಾಬರಿ ! ನೋಡೋಣ ತಡಿ.

ಸು:—ನನಗೇನೋ ಸಂದೇಹ....ನೀನು ಹೇಳೋವನ್ನೆಲ್ಲಾ ನೋಡಿದರೆ....

ಗಂ:—ಸಂದೇಹ ! ನಿನ್ನ ತಲೆ !

ಸು:—ಹೌದು, ನನ್ನ ತಲೆಮೇಲೆ ಕಲ್ಲು ಬೀಳುವುದಕ್ಕೇ ಹೀಗೆಲ್ಲಾ ಆಗಿರುವುದು.

ಗಂ:—ಆತುರಪಡಬೇಡವೇ ಸುಬ್ಬು. ನಿನ್ನ ಹಣವು ವಸೂಲಾದೊಡನೆಯೇ....

ಸು:—ಅದುವರೆಗೂ....

ಗಂ:—ನಿನಗೆ ಬೇಕಾದರೆ ಒಂದು ಕೆಲಸ ಮಾಡು.

ಸು:—ಏನದು ?

ಗಂ:—ನೋಡು. ನಮ್ಮ ಈಶ್ವರನಿಗೆ ಈಗ ಹೇಗೂ ಮದುವೆಯಾಗುತ್ತೆ. ವಿಶಿಷ್ಟ ಕರ್ಚೂ ಪರ್ಚೂ ಎಲ್ಲಾ ನನ್ನದೇ. ಆ ಮದುವೆಯಲ್ಲೇ ನಿನ್ನ ಮಗಳ ಮದುವೆಯನ್ನೂ ಸೇರಿಸಿ ಮಾಡಿಬಿಡು. ಕರ್ಚಿಗೆ ನೂರು ರೂಪಾಯಿ...ತೆಗೆದುಕೋ. ಒಟ್ಟು ಕರ್ಚಿನಲ್ಲಿ ೨೫೦ ರೂಪಾಯಿ ನನಗೆ ಕೊಟ್ಟುಬಿಡು.

ಸು:—ಅಣ್ಣಾ ! ಅದೆಲ್ಲಾ ಯಾತರ ರಗಳೆಯ ಕೆಲಸ? ಮದುವೆಯೆಂದರೆ ಒಂದು ಮದುವೆ ಹೆಣ್ಣಿನ ಗಂಡಿನಕಡೆಯವರು ಕಲೆತರೇನೇ ಎಷ್ಟೋ ರಾದ್ಧಾಂತ ! ಇದರಲ್ಲಿ ಎರಡು ಮದುವೆ ಸೇರಿದರೆ ತಲೆ ತಲೆ ಒಡೆದು ಹೋಗುತ್ತೆ ಅಷ್ಟೆ. ಬೇಡಣ್ಣಾ. ನನಗೆ ಈಗ ಐನೂರು ರೂಪಾಯಿ ಕೊಡು. ಆಮೇಲೆ....

ಗಂ:—ಯಾವುದೂ ಬರಲಿಲ್ಲವಲ್ಲಾ–ಸದ್ಯದಲ್ಲಿ ನಿನ್ನ ಹಣವೂ ಬರುವ ಹಾಗಿಲ್ಲ.

ಸು:—ಹಾಗೆಂದರೆ ಸಾಧ್ಯವಿಲ್ಲಣ್ಣಾ. ನೀನೇ ಯಾವುದಾದರೂ ಕೊಡು. ನನ್ನ ಹಣ ಬಂದಾಗ ಭರ್ತಿ ಹಾಕಿಕೋ...ನಾನು ಬೇಕಾದರೆ ಅದಕ್ಕೆ ಬಡ್ಡಿ ಯಾದ್ರೂ ಕೊಟ್ಟುಬಿಡುತ್ತೇನಣ್ಣಾ !

ಗಂ:—ಬಡ್ಡೀ ! ಎಷ್ಟು ಬಡ್ಡಿ ಕೊಡುತ್ತೀಯೆ ?

ಸು:—ಶೇಕಡ ಒಂದಾರೂಂತ ಇಟ್ಟುಕೋ.

ಗಂ:—ಸಾಧ್ಯವಿಲ್ಲ ಸುಬ್ಬು. ನನ್ನಿಂದ ಸಾಧ್ಯವೇ ಇಲ್ಲ.

ಸು:—ಇದೇನಣ್ಣಾ ಹೀಗೆ ಹೇಳುವೆ? ನೀನೇ ಹೇಳಿದೆಯಲ್ಲಣ್ಣಾ. ಈಗ ಬಡ್ಡಿ ದರ ಇಳಿದುಹೋಗಿದೇಂತ.

ಂ:—ಹೌದು. ಆದರೆ ಯಾರಿಗೆ? ಹಣ ಹೆಚ್ಚಾಗಿರುವವರಿಗೆ. ನಾವು ಹಣವನ್ನು ಬಡ್ಡಿಗೆ ಹಾಕುತ್ತೇವೆಂದರೆ ಬಡ್ಡಿ ಬಹಳ ಕಮ್ಮಿ. ಹಣವನ್ನು ಬಡ್ಡಿಗೆ ಕೇಳಿದರೆ ದರ ಜಾಸ್ತಿ.

ಸು:—ಹಾಗಾದ್ರೆ ?

ಗಂ:—ಅಧಮ ಪಕ್ಷ ಶೇಕಡ ೧೨ ಬಡ್ಡಿಯಾದರೂ ಕೊಟ್ಟರೆ...

ಸು:—ಅಣ್ಣಾ!.... ಹೇಗೂ ಸ್ವಲ್ಪಕಾಲಕ್ಕೆ ತಾನೆ-ಹೋದರೆ ಹೋಗಲಿ. ನಿರ್ವಾಹವಿಲ್ಲ. ನನಗೈನೂರು ರೂಪಾಯಿ ಸರಿಮಾಡಿಕೊಡಣ್ಣಾ.

ಗಂ:— ಸುಮ್ಮನೆ ಹೇಗೇ ಸುಬ್ಬು ಸರಿಮಾಡಿ ಕೊಡುವುದು ?

ಸು:— ಮತ್ತೆಯೇನಣ್ಣಾ-ನೀನು ಹೇಳುವುದಾದರೂ ?

ಗಂ:—ಪತ್ರ ಬರೆದುಕೊಡಬೇಕೆ ಹುಚ್ಚಿ!

ಸು:—ಯಾರಿಗೆ ?

ಗಂ:—ನನಗೆ.

ಸುಬ್ಬು:—ಏತಕ್ಕೆ? ನನ್ನ ಹಣಕ್ಕೆ ನೀನು ಪತ್ರಬರೆದು ಕೊಟ್ಟಿರುವೆಯಾ? ಅಣ್ಣಾ...

ಗಂ:—ಸುಮ್ಮನೆತಿಳಿಯದೆ ಏನೇನೋ ಹರಟುತಾಯಿದ್ದಿಯಾ ನೋಡು.

ಸು:—ತಿಳಿಯುವ ಹಾಗಾದರೂ ಹೇಳಣ್ಣಾ ಹೋಗಲಿ.

ಗಂ:—ನೋಡು ನಿನ್ನ ಹಣ ಕೊಟ್ಟಕಡೆ ಅದಕ್ಕೆ ಬೇರೆ ಪತ್ರ ಬರೆಯಿಸಿದ್ದೇನೆ. ಅದರ ಸಂಬಂಧ ಈಗ ತಕ್ಷಣ ಹಣಹುಟ್ಟುವದಿಲ್ಲ. ನಿನ್ನದರದಿಗಾಗಿ ನಾನು ಈಗ ಬೇರೆ ಹಣ ಕೊಡಬೇಕಲ್ಲವೆ?

ಸು.—ಹೌದು.

ಗಂ:—ಅದಕ್ಕಾಗಿ ನೀನು ನನಗೊಂದು ಪತ್ರವನ್ನು ಬರೆದುಕೊಡಬೇಕು.

ಸು:—ಆಮೇಲೆ ?

ಗಂ:—ಆ ಪತ್ರವನ್ನು ಮತ್ತಾರಿಗಾದ್ರೂ ಹವಾಲ್ತೆಮಾಡಿ ೫೦೦ ರೂಪಾಯಿ ತೆಗೆದುಕೊಡುತ್ತೇನೆ. ನನ್ನಲ್ಲಿಯೇ ಈಗ ಹಣ ಇದೆ ಎತ್ತಿಕೊಟ್ಬಿಡೋದಕ್ಕೆ ಅಂತ ತಿಳುಕೊಂಡು ಬಿಟ್ಟೆಯೇನು! ನೋಡು, ಈಶ್ವರನ

ಮದುವೆಗಾಗಿ ಈಗ ದರಿದ್ರಪಕ್ಷ ೨,೦೦೦ ರೂಪಾಯನ್ನಾದರೂ ನಾನು ಜೋತೆಮಾಡಬೇಕು. ಮದುವೆ ಇನ್ನೂ ಆರೇದಿವಸ ಇದೆ ನೋಡು, ಇದೇ ಸಮಯದಲ್ಲಿ ನಿನಗೂ ತಗಾದೆ. ಏನುಮಾಡಲಿ ?

ಸು:—ಅಣ್ಣಾ ! ಅದೆಲ್ಲಾ ನಂಗೊತ್ತಿಲ್ಲ. ಏನು ಮಾಡೂಂತಾ ಹೇಳ್ತೀಯೋ ಅದನ್ನು ಮಾಡೋಕೆ ಸಿದ್ಧ. ಮುಖ್ಯ ನೋಡು ನನ್ನನ್ನ ಮೋಸಮಾಡ ಬೇಡಪ್ಪಾ! ಮಗಳ ಮದುವೆ ಹೇಗಾದರೂ ನಡೆಸಿಕೊಡುವ ಭಾರ ನಿನ್ನದು. ಅಣ್ಣಾ ! ನಿನ್ನ ಮನೇಲಿ ಮದುವೆ ಗಲಾಟೆಯಲ್ಲಾ ಮುಗಿದ ಮೇಲೆ ನನ್ನ ಹಣದ ಲೆಕ್ಕ ನೋಡಿ ಎಲ್ಲಾ ಫೈಸಲ್ ಮಾಡಿಬಿಡು-ಅಷ್ಟೆ. ಏನೂ ತಿಳೀದವಳು ನಾನು. ಗತಿಗೆಟ್ಟ ಹೆಂಗಸು. ಹೀಗೆಲ್ಲಾ ಹೇಳ್ತೀನೀಂತ ಕೋಪಿಸಬೇಡ. ನನಗೆ ತಿಳುವಳಿಕೆ ಸಾಲದು. ನಾನು ಹೊರಡಲೇನಣ್ಣಾ ?

ಗಂ:—ಹೊರಡಮ್ಮಾ, ಸುಬ್ಬು !

ಸು:—ಹಣಕ್ಕೆ ?

ಗಂ:—ಸಂಜೆಗೆ ಬಾ ಹೋಗೆ ಕೊಡ್ತೀನಿ. ಹಾಗೇ, ಸುಬ್ಬು ! ಸ್ವಲ್ಪ ಹುರೀ ಹಿಟ್ಟು ಇದ್ರೆ ತಕ್ಕೊಂಡುಬಾರೆ. ಮರೀಬೇಡ.

(ಸುಬ್ಬುವು ಹೋಗುವಳು).

(ಸ್ವಗತ) ಅಬ್ಬಬ್ಬ! ಒಂದುರಗಳೆ ಹರಿದಂತಾಯಿತು. ಇವಳ ಹಣ ವೇನ್ನೋ ಒಟ್ಟು ೨,೬೦೦ ಕ್ಕೆ ಮೇಲ್ಪಟ್ಟಿದೆ. ಗುಟ್ಟುಬಿಟ್ರೆ ಆದಾಯ ಹೋಯ್ತು. ಬಂದು ಹೊಡಕೊಂಡಾಗ ಒಂದಷ್ಟು ಅಶನ ಹಾಕಿದ್ರೆ ಸರಿ. (ಪ್ರಕಾಶ) ಲೋ ಮುದ್ದ ! ಮುದ್ದ !

ಮುದ್ದ:—(ಪ್ರವೇಶಿಸಿ) ಬುದ್ಧೀ! ಲಗ್ನಪತ್ರಿಕೇಗೋಳು ತಂದ್ ಮಡಗೀವ್ನಿ. ಆ ಸಂಗಪ್ಪ ಮನೆಯಾಗಿಲ್ಲ. ಸಾಮುರಾಯರನ್ನ ಬರೇಳಿದ್ರಲ್ಲಾ ಅವರು ನಾಬರ್ತೀನಿ ನಡಿಯೋ ನೀಮುಂದೆ ಅಂತಂದ್ರು. ಆ ಇಸುವ ನಾತಪ್ಪ ಬುದ್ಧಿ! ಬಡ್ಡೀ ಅಣಾ ಕೇಳೋಕೆ ಓದ್ರೆ "ಕಾಲು ಮುರಿದ ಬುಡ್ತೀನಿ ಮನೆತಾಕ್ ಬಂದ್ರೆ—ಕತ್ತು ಇಡಿದು ಆಸೀಗೆ ದವದಾಂತ ತೆಳ್ಳಿಸ್ ಬುಡ್ತೀನಿ. ಉಸಾರಾಗಿರು-ನಿಮ್ ಎಜಮಾನರಿಗೇನೋ

ಗಾಸಾರ ಒಕ್ಕರಸ್ಬುಟ್ಬೈತೆ ಅಂತ ಓ ಗೇಳು'' ಅಂತೆಲ್ಲಾ ಗದರಿಸುಡುರು ಬುದ್ದೀ! ಈ ಬಾಕೀ ವಸೂಲೂಸಾಕು-ಬೈಗೋಳೂ ಸಾಕು; ಬುಡಿ ಬುದ್ಧೀ! ನಿಮ್ ಸಾಕರೀ ಸಾಕಾಗೋಗ್ಬೈತೆ ಈ ಪಟ್ಟಿ. ಅವೊತ್ತು ಆ ಇರಣ್ಯಪ್ಪೋನೋರಂಗ್ರು-ದಾನಾ ಊಡುಬುಡ್ತಾರಂತೆ ನಿಮ್ ಮ್ಯೇಲೆ ಅಂದಿದ್ಕೇ "ಓಗಿ ಏಳೋ, ನಿನ್ನೂ ನಿಮ್ಮೈಜಮಾನ್‌ರನ್ನೂ ಒಟ್ಟಿಗೆ ಸಿಗಿದು ತೋರಣಾ ಕಟ್ಬುಡ್ತೀಸಿ" ಂತ. ಅಯ್ಯೋ ನನ್ನೊಡೆಯಾ!

ಗಂಗಾ:—ಥೂ ಹುಚ್ಚುಮುಂಡೆ!

ಮುದ್ದ:—ಇದ್ಯಾಕಾ ಬುದ್ಧೀ! ನೀವೂ ಬೊಯ್‌ತ್ತಿದ್ದೀರ್ಯಲ್ಲಾ? ಅವರೆಲ್ಲಾ ಬೋದದ್ದು ಸಾಲದೂಂತ್ಲಾ?

ಗಂ:—ಅಲ್ಲವೋ, ಮುಟ್ಠಾಳ! ಬಾಕೀ ವಸೂಲ್ಮಾಡಿಕೊಂಡು ಬಾರೋಂದ್ರೆ ಬಂದದೇನೇನೋ ಪುರಾಣಾ ಒದರ್‌ತಾ ಇದ್ದೀಯಲ್ಲೋ? ಪುರಾಣಾನ್ನಾ! ಅವಿವೇಕಿ!

(ಪ್ರವೇಶ: ಶ್ಯಾಮರಾಯ)

ಮು:—ಅಗೋ! ಸಾಮರಾಯರು ಬಂದ್ರು ಬುದ್ಧಿ!

ಶ್ಯಾ:—ಚೆನ್ನಾಗಿದ್ದೀರ ಭಾವ?

ಗಂ:—ಬಾ ಶ್ಯಾಮು! ಏನಪ್ಪಾ ಉಪೇಕ್ಷೆ?

ಶ್ಯಾ:—ಉಪೇಕ್ಷೆ ಎಂತಾದ್ದು ಭಾವ? ನೀವು ಬೇಕಾದರೆ ಉಪೇಕ್ಷೆಮಾಡಿದಿರಿ. ಅಕ್ಕ ನಿರಬೇಕಾದರೆ ಕೊನೇಲಿ ಸಾಯೋವಾಗಲೂ ನಮ್ಮಕವಲೂನ್ನೇ ಈಶ್ವರನಿಗೆ ಕೊಟ್ಟು ಮದುವೆ ಮಾಡಬೇಕೂಂತ ಹೇಳದ್ದು. ಈಗ ನೋಡಿದ್ರೆ ಎಲ್ಲಾ ಬೇರೆಯಾಗಿ ಹೋಯ್ತು. ಏನೋ ಹೀಗೆಯೇ, ಎಲ್ಲಾ ಪ್ರಾಪ್ತ!

ಗಂ:—ಹೊಂ! ನೀನು ಹೇಳಿದೆಯಲ್ಲಾ ಆ ಮಾತು ಪ್ರಾಪ್ತ ಅಂತ. ಅದು ಸರಿಯಾದ ಮಾತು! ಶಾಮೂ! ಯಾರು ಯಾರಿಗೆ ಎಲ್ಲೆಲ್ಲಿ ಪ್ರಾಪ್ತಿ ಇದೆಯೋ? ಹಾಗೂ ಶಾರದೇನ್ನ ತಂದು ಈಶ್ವರನಿಗೆ ಮದುವೆ ಮಾಡುವ ಪ್ರಯತ್ನಕ್ಕೆ ನಾನು ಕೈಹಾಕಲೇ ಇಲ್ಲ. ನೋಡು,

ಏನೋ ವೇಳೆ ಬಂತು ಎಲ್ಲಾ ಸಿದ್ಧಿಸೋದಕ್ಕೆ ಆರಂಭ. ಹಾಗ ನೋಡ್ದೆ-ನಿಮ್ಮಕ್ಕನ ಆತ್ಮಕ್ಕೆ ಯಾತಕ್ಕೆ ಶಾಂತಿ ಭಂಗಮಾಡು ದೂಂತ. ಕಮಲೂನ್ನೆ ಕೊನೇಗೆ ಮದುವೆಮಾಡಿಬಿಡೋಣವೆ ಈಶ್ವ ನಿಗೇಂತ ಅನ್ನಿಸ್ತು. ಆದರೆ ನೋಡ್ತು ಶಾಮೂ! ಕಮಲೂಗಿನು ನೆಟ್ಟಗೆ ಒಂಬತ್ತು ವಯಸ್ಸು ತುಂಬಲಿಲ್ಲ. ಶಾರದೇಗೆ ಹದಿಮೂರಃ ಹದಿನಾಲ್ಕನೇದು ನಡೀತಾ ಇದೆ. ಜಾತಕ ಅಚ್ಚುಮೆಚ್ಚಾಗಿ ಕೂ ತಪ್ಪ ಒಂದಕ್ಕೊಂದು. ಧನರಾಶಿ ಬಹಳ ದಿವ್ಯವಾಗಿದೆ. ಇದ ಮೇಲೆ ನರಹರಿಶಾಸ್ತ್ರಿಗಳಂತೂ ಬಹಳ ಯೋಗ್ಯರು. ಈಗಲೇ ಮದುವೆ ಮಾಡಿ ಬಿಡಬೇಕೂಂತ ಗಂಡಹೆಂಡಿರ ಹಠ. ಅಲ್ಲದೆ ಈಶ್ವರನ ತಮ್ಮ ಅಳಿಯನಾಗಬೇಕೂಂತ ಅವರ ಇಚ್ಛೆ! ಅವನ ವಿದ್ಯೆ ಎಷ್ಟು ಖರ್ಚಾದರೂ ನಮಗಿರಲೀ ಅಂದ್ರು. ಹೀಗೆಲ್ಲಾ ಇದೆ ನೋ ಡು. ಏನುಮಾಡುವುದು ಶಾಮೂ? ನಿನ್ನ ಸಂಬಂಧ ತಪ್ಪಿ ಹೋಯಿ ತೂಂತ ಚಿಂತಿಸಬೇಡಪ್ಪ! ಇದ್ದದನ್ನು ಇದ್ದಹಾಗೆ ಹೇಳಿಬಿಟ್ಟಿದ್ದೇನೆ ಅದರಲ್ಲಿಯೂ ಒಂದು ಮುಖ್ಯವಾದ ವಿಷಯ ಏನೆಂದರೆ—ನಿಮ್ಮ ಅಕ್ಕ ತೀರಿಕೊಂಡಮೇಲೆ ಈ ಮನೇಲಿ ಹೆಣ್ಣು ದಿಕ್ಕುಗತಿ ಇಲ್ಲ. ಏನೋ ವಯಸ್ಸಾದ ಹೆಣ್ಣು ಮನೇಗೆ ಬಂತೂ ಅಂತಂದ್ರೆ ಸಂಸಾರ ಅಷ್ಟು ನೆಟ್ಟಗಾಗುತ್ತೇಂತ. ಅಷ್ಟೇಪ್ಪ! ನಮ್ಮ ಸುಂದರೂನಾದ್ರೂ ನಮ್ಮ ಮನೇಲಿ ಎಷ್ಟು ದಿವಸ ಇರುತ್ತೆ ಶಾಮೂ? ಏನಿದ್ರೂ ಮದುವೆಯಾಗಿ ಗಂಡನ ಮನೇಗೆ ಹೋಗಿ ಬಾಳಬೇಕು. ಅರೀದಹುಡುಗಿ ಅದರಲ್ಲೂ.

ಶ್ಯಾ:—ಭಾವ! ನಾನು ಮೊದಲೇ ಹೇಳಿದೆನಲ್ಲಾ ಎಲ್ಲಾ ಅವರವರ ಪ್ರಾಪ್ತೀಂತ ಇನ್ಯಾಕೆ ಬಿಟ್ಟು ಬಿಡೀ ಅಪ್ರಸ್ತಾಪಾನ್ನ. ದೈವೇಚ್ಛೆ ಇದ್ದಂತೆ ಆಗಲಿ. ಇನ್ನು ನಾನು ಹೊರಡಲೇ?

ಗಂ:—ಏನಪ್ಪಾ ಅವಸರ? ಅಂದಹಾಗೆ ಶಾಮೂ! ಮದುವೆವೇಳೆಗೆ ಎಲ್ಲಿಯಾ ದರೂ ನಡೆದು ಬಿಟ್ಟೀಯಪ್ಪಾ. ಎಲ್ಲಾ ನಿಂದೂಂತ ತಿಳಕೊಂಡು ನಡಿಸಿಕೊಡಬೇಕಪ್ಪಾ! ಈಶ್ವರನೇನು ನಿನಗೆ ಹೊರಗಿನವನೇ? ಸಾಕ್ಷಾತ್ ಅಕ್ಕನಮಗ!

ಶ್ಯಾ:—ಭಾವ! ನೀವಿಷ್ಟು ಉಪಚಾರಹೇಳಬೇಕೆ? ನನ್ನಿಂದಏನಾಗ ಬೇಕಾ ದ್ರೂ ಸರಿ ಸಿದ್ಧವಾಗಿದ್ದೇನೆ.

ಗಂ:—ನೋಡಿದೆಯಾ ನೀನು ಆ ಮಾತನ್ನು ಅಂದತಕ್ಷಣ ಜ್ಞಾಪಕಕ್ಕೆ ಬಂತು. ಈಗ ನೋಡು ಶಾಮೂ! ಮಗನ ಮದುವೇಂದ್ರೆ ಸುಮ್ಮನೇ ಆಗುತ್ತೇನಪ್ಪಾ? ಯಾವುದಾದ್ರೂ ಅನಿರೀಕ್ಷಿತ ಖರ್ಚುಗಳು ಬಂದೊ ದಗಿ ಬಿಡುತ್ವೆ. ಸಮಯದಲ್ಲಿ ಹಿಂದೂಮುಂದೂ ನೋಡೋ ಹಾಗಿಲ್ಲ. ನೋಡು ಶಾಮೂ! ನಿನ್ನದು ಆಬಾಕಿ! ಅದನ್ನು ಈಗ ಕೊಟ್ಟು ಬಿಟ್ರೆ ಬಹಳ ಉತ್ತಮಕಾಣಪ್ಪಾ!

ಶ್ಯಾ:—ಯಾವಬಾಕಿ?

ಗಂ:—ಇದೇನು ಶಾಮೂ ಹೀಗೆ ಕೇಳ್ತಾ ಇದ್ದಿಯಾ? ಅದೇಪ್ಪ, ಹೋದ ಡಿಸೆಂಬರಿನಲ್ಲಿ ನಾವೆಲ್ಲಾ ತಿರುಪತೀಗೆ ಹೋಗಲಿಲ್ಲವೇ? ಆಗ....ನಿನಹೇ

ಶ್ಯಾ:—ಇದೇನು ಭಾವನವರೇ! ತಿರುಪತಿಯಾತ್ರೆ ಖರ್ಚಿಗಾಗಿ ಯಾರ ಹತ್ತಿ ರಲೂ ಒಂದುಕಾಲಾಣೆ ನಾನು ಅಪೇಕ್ಷಿಸೋದಿಲ್ಲ. ಅಂದ್ರೀ! ಈಗ ದರ ಬಾಕಿಯನ್ನು ಹೇಳುತ್ತಾ ಇದ್ದೀರಲ್ಲಾ? ನೀವೇ ಬಾಯೆಂದು ಬಲ ವಂತಮಾಡದಿದ್ದರೆ ನಾನು ಬರುತ್ತಲೇ ಇರಲಿಲ್ಲ. ಈ ವಿಷಯಾನ್ನ ನೀವು ಮೊದಲೇ ಹೇಳಿದ್ರೆ ಚೆನ್ನಾಗಿತ್ತಲ್ಲವೇ?

ಗಂ:—ಯಾವಾಗ ಹೇಳಿದ್ರೇನು ಶ್ಯಾಮೂ!

ಶ್ಯಾ:—ಭಾವನವರೇ! ಒಪ್ಪಿಕೊಂಡೆ. ತಪ್ಪುನಂದು. ನಾನು ಮೊದಲೇ ತಿಳು ಕೋಬೇಕಾಗಿತ್ತು.

ಗಂ:—ಏನನ್ನು?

ಶ್ಯಾ:—ನೀವು ಹೀಗೆಲ್ಲಾ ಮಾಡುತ್ತೀರೀಂತ!

ಗಂ: ಈಗ ಆಗಿ ಹೋದ್ದೇನು ಶ್ಯಾಮೂ? ನಿನಗಾಗಿ ಆಗಿರುವ ಕರ್ಚನ್ನು ಬರೆದಿಟ್ಟದ್ದೇನೆ. ಇದೋ ನೋಡು ಲೆಖ್ಖ. ನಿಂದೊಬ್ಬಂದೇ ಅಲ್ಲ ಶ್ಯಾಮು! ಇದೋ, ನನ್ನೊಡನೆ ಬಂದ ಎಲ್ಲರ ಲೆಖ್ಖಾನ್ನೂ ಬರೆದಿಟ್ಟ ದ್ದೇನೆ. (ಲೆಖ್ಖವನ್ನು ತೋರಿಸುವನು.)

ಶ್ಯಾ: (ಲೆಕ್ಕವನ್ನು ನೋಡಿ) ಸರಿಸರಿ ಎಲ್ಲಾ ಭಾಗಹಾಕಿದ್ದೀರಿ. ಕೆಲವುಕಡೆ ಮೂರೇ ಜನಕ್ಕೆ ಭಾಗಹಾಕಿದ್ದೀರಿ. ನಿಮ್ಮನ್ನು ವಜಾಹಾಕಿಕೊಂಡಿದ್ದೀರಲ್ಲಾ ಕಾರಣ ?

ಗಂ: ಹೌದು ಶ್ಯಾಮು ! ನಿಮ್ಮ ಹಾಗೆ ಫೋಟೋ ಖರ್ಚು ನನಗಿಲ್ಲ ದೇವರ ಪ್ರಸಾದತಿಂದು ಕಾಲಕಳೆದೆ. ದೋಣಿಖರ್ಚಿಲ್ಲ. ಕಾಲುನಡಿಗೇಲ್ಲೇ ಹೋದೆ. ಕೂಲಿಖರ್ಚಿಲ್ಲ. ನನ್ನ ಸಾಮಾನು ನಾನೇ ಹೊತ್ತುಕೊಂಡುತಿರುಗಿದೆ. ಏನೋ ನಿಮಗೆ ಗಾಡಿಬೇಕೂಂತ ನೀವು ಗಾಡಿ ಮಾಡಿದ್ರಿಂದ ನಾನೂ ಅದರಲ್ಲಿ ಹತ್ತಿದೆ ಅಷ್ಟೇ ! ಸತ್ರದಲ್ಲಿ ನಾನು ಹೊರಗಡೆ ವರಾಂಡದಲ್ಲೇ ಬಿದ್ದುಕೊಂಡೆ ಹಾಲುಗೀಲು ಕುಡೀಲಿಲ್ಲ. ಹಣ್ಣು ಹಂಪಲು ತಿನ್ನಲಿಲ್ಲ. ಹೀಗಿರಬೇಕಾದ್ರೆ ಕರ್ಚಿನ ಭಾಗ ಇದರಲೆಲ್ಲಾ ನನಗೂ ಹೇಗೆ ಅನ್ವಯಿಸುತ್ತೆ ಶ್ಯಾಮೂ ?

ಶ್ಯಾ:—ಭಾವನವರೇ ! ಬಹಳ ಧನ್ಯನಾದೆ. ನಾನು ಹೊತ್ತ ನಿಮಗೆ ರೂ. 31–9–1 ಕೊಡಬೇಕಲ್ಲವೆ ? ಇದರಲ್ಲಿ 4 ತಿಂಗಳು 11 ದಿವಸ ಬಡ್ಡಿ ಶೇಕಡ 12ರಂತೆ ರೂ. 1–7–7 ಸೇರಿದೆಯಲ್ಲವೇ ? ಅಲ್ಲ, ಯಾತ್ರೆಮಾಡುವ ಕಾಲದಲ್ಲಿ ಇಷ್ಟು ಲೆಕ್ಕ ಬರೆದಿಡೋದಕ್ಕೆ ನಿಮಗೆ ದೊರೆತಕಾಲ ಯಾವಾಗ ಅಂತ ? ಅಂತೂ ತಿರುಪತೀಗೆ ಹೋದಮೇಲೆ ಬಡ್ಡಿ ಲೆಕ್ಕ ಚೆನ್ನಾಗಿ ಕಲಿತುಕೊಂಡಿರಿ ಪರವಾ ಇಲ್ಲಾ !

ಗಂ: ಹಾಗೆಂದರೆ ? ಶ್ಯಾಮೂ !

ಶ್ಯಾ: ಭಾವನವರೇ ! ಅದೇನೋಡಿ. ನಾನು ಮೊದಲೇ ಹೇಳಿದೆ. ನಿಮ್ಮೊಂದಿಗೆ ಯಾತ್ರೆ ಬೇಡಾಂದೆ. ಇರಲಿಬಾ, ಒಬ್ಬರಿಗೊಬ್ಬರು ಸಹಾಯಾಂದ್ರಿ ನನ್ನ ಕೈಲಿಕಾಸಿಲ್ಲಾಂದೆ. ಚಿಂತೆಯಿಲ್ಲಾಂದ್ರಿ. ಈಗೇನಂದ್ರೆ-ಕರ್ಚು, ಬಾಕಿ, ಬಡ್ಡಿ ! ಭಾವನವರೇ ! ಧನ್ಯನಾದೆ ! ನಿಮಗೂ ಹೇರಾಳವಾದ ಪುಣ್ಯಬಂತು.

ಗಂ: ಹಾಗಾದರೆ ಈ ಬಾಕಿ ಯಾವಾಗ ಕೊಡ್ತೀಯ ಶ್ಯಾಮೂ ? ಈಗ ಕೊಡದೆ ಇದ್ರೆ ವಿಧಿಯಿಲ್ಲ ನೋಡು. ಮದುವೆಖರ್ಚಿಗೆ ಬೇಕು.

ಶ್ಯಾ:—ಭಾವ! ನಿಮ್ಮ ಯಾತ್ರೆ ಫಲ ನಿಮಗೇ ಇರಲಿ. ನಿಮ್ಮ ಬಿದ್ದೀ. ಲೆಖ್ಖ ಭದ್ರಮಾಡಿ (ಹೊರಡುವನು).

ಗಂ:—ಶ್ಯಾಮೂ! ಶ್ಯಾಮೂ! (ನಿಟ್ಟುಸಿರನ್ನು ಬಿಡುವನು).

ದೃಶ್ಯ ೪] [ಸ್ಥಾನ:– ಪಾರ್ಕು.

(ಪಾತ್ರಗಳು: ಈಶ್ವರ ಭಟ್ಟ–ಪುರುಷೋತ್ತಮ).

ಪುರು:—ಈಶ್ವರ್! ನಿನಗೊಂದು ಮಾತು.

ಈ:—ಏನದು?

ಪುರು:—ನೀನು ಖಿನ್ನನಾಗಬಾರದು.

ಈ:—ಪುರುಷೋತ್ತಮ್! ಹೇಳುವುದು ಸುಖ. ಅನುಭವಿಸುವುದು ಕಷ್ಟ. ನೀನೇನೋ ನನ್ನ ಆಪ್ತಸ್ನೇಹಿತ. ನನ್ನ ಹಿತವನ್ನು ಬಯಸುವೆ ಅಹುದು. ನನ್ನಲ್ಲಿ ಬಹಳ ವಿಶ್ವಾಸವನ್ನೂ ಇಟ್ಟಿರುವೆ. ನನ್ನಲ್ಲಿ ನಿನಗೆ ಹೃದಯಾಂತರ್ಗತ ಪ್ರೀತಿಯುಂಟು. ಆದರೆ...

ಪುರು:—ಈಶ್ವರ್! ನಿನ್ನ ತಂದೆ ಹಣವಂತ! ನಿನಗೆ ಹೆಣ್ಣು ಕೊಡುವ ಮಾವ್ನ ಅದಕ್ಕೆ ಒಂದು ಕೈಮೀರಿಸಿದವರು. ಹೀಗಿರಲು ನಿನ್ನ ಚಿಂತೆ! ನಿನ ಸ್ಥಿತಿಯಲ್ಲಿ ನಾನಿದ್ದಿದ್ದರೆ......

ಈ:– ಪುರುಷೋತ್ತಮ್! ಬೇಡ! ನನ್ನ ಸ್ಥಿತಿ! ಅದು ನನ್ನ ಶತ್ರುಗಳಿಗೂ ಬೇಡ.

ಪುರು:—ಇದೇನು? ಈಶ್ವರ್! ನಿನಗೇನು ಮತಿಭ್ರಮಣವೇ?

ಈ:—ಅಹುದು, ಗೆಳೆಯಾ! ನಿಜ. ಮತಿಭ್ರಮಣ! ಸರಿಯಾಗಿ ನುಡಿದೆ. ಅಷ್ಟಲ್ಲದೇನು? ತಾಯಿಲ್ಲದಮೇಲೆ ಎಷ್ಟುವಯಸ್ಸಾದರೇನು? ತಾಯಿಲ್ಲದಮೇಲೆ ಜೀವನವು! ಅಯ್ಯೋ! ಪುರುಷೋತ್ತಮ್! ತಾಯಿಯು ನನ್ನ ಬೆಂಬಲ! ಆಕೆ ಮಡಿದಳು. ನನ್ನನ್ನೂ-ನಮ್ಮ ಪ್ರೇಮದಕಂದ! ತಂಗಿ! ಅರಿಯದ ಸುಂದರಿ! ನಮ್ಮಿಬ್ಬರನ್ನೂ ಬಿಟ್ಟು ನಡೆದಳು.

ಮನೆಯಲ್ಲಿ ಅಮ್ಮಾ! ಎಂದು ಯಾರನ್ನು ಕರೆಯುವುದು ? ಮನೆಯನ್ನು ಹೊಕ್ಕಾಕ್ಷಣಕ್ಕೆ ಯಾರು ನನ್ನನ್ನು "ಬಾ, ಈಶ್ವರಾ!" ಎಂದು ಆದರದಿಂದ ಕರೆದು ಎರಡು ತುತ್ತು ಸವಿಯೂಟವನ್ನು ಬಡಿಸುವವರು?

ಪುರು:—ನಿನ್ನ ತಂದೆ! ಅವರಿರುವಾಗ?

ಈ:—ಪುರುಷೋತ್ತಮ್! ತಂದೆ! ಅಹುದು. ತಂದೆ! ಪ್ರಯೋಜನ? ಲೋಭಿ! ಪರಮಲೋಭಿ! ದುಡ್ಡಿನಮುಂದೆ ಮಕ್ಕಳೆ? ದುಡ್ಡಿನಮುಂದೆ ಮಾನವೆ? ದುಡ್ಡಿನಮುಂದೆ ನಡತೆಯೆ? ದುಡ್ಡಿನಮುಂದೆ ಕನಿಕರವೆ? ಅಯ್ಯೋ! ಈಶ್ವರನೊಬ್ಬ ವಯಸ್ಸಾದವನು! ಕಾಲೇಜಿನಲ್ಲಿ ಓದುವನು! ನಿಜ! ಆದರೆ, ಈಶ್ವರನಿಗೆ ಶಾಂತಿಯೆಲ್ಲಿ? ಸ್ವಾತಂತ್ರ್ಯವೆಲ್ಲಿ? ಮಾನವೆಲ್ಲಿ? ಮನಸ್ಸಿನ ನೆಮ್ಮದಿಯೆಲ್ಲಿ? ಅಪ್ಪ! ಅಪ್ಪನಿಗೆ ಧನಪಿಶಾಚಿ! ಜಿಪುಣರಲ್ಲಿ ಅಗ್ರೇಸರ! ಜಿಪುಣತನದಮುಂದೆ ಅವನಕಣ್ಣಿಗೆ ಮಕ್ಕಳಕ್ಷೇಮ! ಆದೆಲ್ಲಿ ಕಾಣುವುದು? ಪುರುಷೋತ್ತಮ್! ನೋಡು. ಈ ವಿಚಿತ್ರಗಳನ್ನು! "ಕಾಪಿಕುಡೀಬೇಡಾ ಈಶ್ವರಾ" ಎನ್ನುತ್ತಾನೆ. "ಕುಡಿದರೆ ಮೈಗೆ ಉಷ್ಣವಾಗುತ್ತೆ. ಅನ್ನದಗಂಜಿಗೆ ಉಪ್ಪು ಹಾಕಿ ಕುಡಿ, ತಂಪಾಗಿರುತ್ತೆ" ಅನ್ನುತ್ತಾನೆ. ದಿನಬೆಳಗಾದರೆ ಮೆಣಸಿನಸಾರು-ಅನ್ನ! ಅಷ್ಟೇ. ನಂಜಿಕೊಳ್ಳುವುದಕ್ಕೆ ಮೇಲೊಂದಿಲ್ಲ. ಇದಕ್ಕೆ ಹೆಚ್ಚಿನದು ತಿಂದರೆ "ಅಜೀರ್ಣ" ಎನ್ನುತ್ತಾನೆ. ಬಾಳೆಹಣ್ಣು ತಿಂದರೆ "ಸಿಪ್ಪೇಲಿರೋದು ಹಾಳುಮಾಡಬೇಡವೋ-ಅದನ್ನೂ ತಿನ್ನು ಮೈಗೊಳ್ಳೇದು" ಅನ್ನುತ್ತಾನೆ. "ಬಟ್ಟೆ ಅಗಸನಿಗೆ ಹಾಕಬೇಡ, ಹರಿದು ಹೋಗುತ್ತೆ" ಅಂತಾನೆ. ಸಾಬೂನು ಅಂದರೆ "ಬಟ್ಟೆ ಸುಟ್ಟು ಹೋಗುತ್ತೆ" ಅಂತಾನೆ. ಮಳೆ ರ್‍ಹೋ ಅಂತ ಸುರೀತಿರಬೇಕಾದ್ರೆ "ತಣ್ಣೀರು ಸ್ನಾನ ಮಾಡೋ, ಇಲ್ಲದಿದ್ರೆ ಮೈಗೆ ಉಷ್ಣ" ಅಂತಾನೆ. ಸರಿ, ರಾತ್ರಿ ವಿರಾಮವಾಗಿ ಕೂತುಕ್ಕೊಂಡು ಕಾಲೇಜ್ ಪಾಠ ಓದಿಕೊಳ್ಳೋಣ ಅಂದ್ರೆ "ದೀಪ ಆರಿಸಿ ಬಿಟ್ಟು ಮಲಗಿಕೊಳ್ಳೋ ಈಶ್ವರ! ದೀಪದ ಬೆಳಕಿನಲ್ಲಿ ಎಷ್ಟು ಹೊತ್ತೂ ಓದಿದ್ರೆ ಕಣ್ಣಿಗೆ ಒಳ್ಳೇದಲ್ಲ. ಬೆಳಗಿನ ಝಾವ ಎದ್ದು ಓದು" ಅಂತಾನೆ. "ಕಾಲೇಜಿಗೆ ಹೋಗ್ತಾ ಒಂದಷ್ಟು ಮೊಸರ

ನ್ನಾನ್ನ ತಕ್ಕೊಂಡು ಹೋಗೋ ಈಶ್ವರ! ಮಧ್ಯಾನ್ಹಕ್ಕೆ ಆಗುತ್ತೆ. ಹೋಟೆಲ್ ಗೀಟಲ್ಲಿಗೆ ಹೋಗೋದು ಬೇಡ. ಕಾಲರಾ, ಪ್ಲೇಗೂ" ಅಂತಾನೆ. ಕಾಲಿಗೊಂದು ಮೇಜೋಡು ಬೇಡಾಂತಾನೆ. ಮಳೆಬಂದ್ರೆ ಒಂದು ಛತ್ರೀಪ್ಪಾ ಅಂದ್ರೆ "ಛತ್ರೀಯಾಕೋ ಕಳೆದುಹೋಗುತ್ತೆ" ಅಂತಾನೆ. ಒಂದು ಬೈಸಿಕಲ್ಲಾದ್ರೂ ತೆಕ್ಕೊಡಪ್ಪಾ ಕಾಲೇಜಿಗೆ ಹೋಗೋದಕ್ಕೇ ಅಂದ್ರೆ "ಇದೇನೋ ಈಶ್ವರ! ಅಲ್ಲ ನಿನ್ನತಲೇಲಿ ದುಡ್ಡು ಮಿಗಿಸೋಯೋಚನೇನೇ ಹೊಳೆಯೋಲ್ಲವಲ್ಲಾ ಯಾಕೇಂತ? ಹಾಂ! ನಿನ್ನ ಸ್ನೇಹಿತರಮನೇಲ್ಲಿ ಮೋಟಾರು ಇದೆಯಲ್ಲಾ! ಅದರಲ್ಲೇ ಹೋಗೂ" ಅಂತಾನೆ. ಸರಿ. ಬಟ್ಟೆ ಹೊಲಿಸ್ಕೋಬೇಕಪ್ಪಾ, ಎಲ್ಲಾ ಹರಿದುಹೋಗಿದೆ. ಕಾಲೇಜಿನಲ್ಲಿ ಹುಡುಗರೆಲ್ಲರೂ ಪರಿಹಾಸ್ಯ ಮಾಡ್ತಾರೇ ಅಂತಂದ್ರೆ "ಇನ್ನು ಸ್ವಲ್ಪ ದಿವಸ ತಡಿಯೋ ಈಶ್ವರ! ಈಗೇನೋ ಅವಸರ? ಅದ್ಯಾವುದೋ ಜರ್ಮಾ ಬಟ್ಟೆಬರುತ್ತಂತೆ. ಎಂಟುಗಜಕ್ಕೆ ಆರಾಣೆಯಂತೆ! ಆವಾಗ ತಕ್ಕೊಂಡು, ನಾನೂ ನೀನೂ ಹೊಲಿಸಿಕೊಳ್ಳೋಣ" ಅಂತಾನೆ. ಈಗ ಸುತರಾಂ ಬಟ್ಟೆ ಇಲ್ಲಾಪ್ಪಾ! ಈ ಅವಮಾನ ಸಹಿಸೋಕಾಗೋಲ್ಲ ಅಂತಂದ್ರೆ, "ಹಾಗಾದರೆ ಗುಜಲೀಗೆ ಹೋಗಿನೋಡು. ಕೇಳೋವ್ರುದಿಕ್ಕಿಲ್ಲದೆ ಬೇಕಾದಷ್ಟು ಬಟ್ಟೆ ಬಿದ್ದಿದೆ ಅಲ್ಲಿ. ಒಂದ್ಕೈದಾರಾಣೆ ಕೊಟ್ಟು ಯಾವುದಾದರೂ ತಕ್ಕೊಳ್ಳೊ! ಹ್ಯಾಗಾದ್ರೂ ಸುದಾರಿಸೋ ಈಶ್ವರ! ಸದ್ಯದಲ್ಲಿ ಎಲ್ಲಾ ಕರ್ಚು ಒಟ್ಟಿಗೆ ಬಂದು ಬಿಟ್ರೆ-ನಾನೆಲ್ಲಿ ಹೋಗಿ ತಲೆ ಚಚ್ಚಿಕೊಂಡು ಪ್ರಾಣಬಿಡಲೋಪ್ಪ?" ಅಂತಾನೆ. ಪುಸ್ತಕ ತೆಗೀಬೇಕಪ್ಪಾ, ಷೇಕ್ಸ್‌ಪಿಯರ್ಸ್ ಪ್ಲೇಸ್ (Shakespeare's Plays) ಈ ಟರ್ಮ್ (Term) ನಲ್ಲಿ ಆರಂಭಿಸ್ತಾರೆ ಅಂದ್ರೆ "ನಾಲ್ಕು ದಿನಕ್ಕಾಗಿಯಾತಕ್ಕೋ ಹೊಸ ಪುಸ್ತಕ? ಈಶ್ವರಾ! ಯಾರಾದರೂ ಸ್ನೇಹಿತರ ಹತ್ತಿರ ತೆಗೆದುಕೊಂಡು ಓದಿ ಕಾಲಕಳೆದುಬಿಡೋ" ಅಂತಾನೆ. ಇಲ್ಲಾಪ್ಪಾ, ಸಾಧ್ಯವಿಲ್ಲ ಅಂದ್ರೆ "ಹಾಗಾದ್ರೆ ನನಗೂ ಸಾಧ್ಯವಿಲ್ಲಪ್ಪಾ, ಹಾಗೇಬೇಕಾದ್ರೆ ಓದುನಿಲ್ಲಿಸಿ ಬಿಡು. ಈಗ ಬಂದಿರೋದೇಸಾಕು" ಅಂತಾನೆ. ಅಪ್ಪಾ ನೋಟ್ ಬುಕ್ಸ್ (Note Books) ಅಂದರೆ "ಸರಿ,ಸರಿ, ಕೊನೆ ಮೊದಲಿಲ್ಲ

ನೋಡು ನಿನ್ನ ಖರ್ಚಿಗೇ! ಅಟ್ಟದಮೇಲೆ ನನ್ನ ಹಳೇ ಕೋಟ್ ರಿಕಾರ್ಡುಗಳೆಲ್ಲಾ ಬಿದ್ದಿದೆಯಲ್ಲಾ! ಅದರಲ್ಲಿ ಒಂದುಕಡೆ ಮಾತ್ರ ಬರೆದಿದೆ. ಇನ್ನೊಂದು ಕಡೆ ನಿನಗೆ ಬೇಕಾದ್ದು ಬರಕೋ, ಕಾಲತಳ್ಳು! ಸುಮ್ಮನೆ ದುಂದು ಮಾಡಬೇಡ" ಅಂತಾನೆ. ಸರಿ ಆಯ್ತು; ಕಾಲೇಜುಫೀಸು (College Fees) ಬೇಕಪ್ಪಾಂದ್ರೆ, "ಸರಿ,ಸರಿ, ಏನೋ ಇದು? ತಿಂಗಳು ತಿಂಗಳಿಗೂ ಕಾಲೇಜು ಫೀಸೇ? ಎಲ್ಲಿಂದ ತರೋದೋ? ಈಪ್ರೊಫೆಸರು (Professor) ಗಳು ಕಮ್ಮಿ ಸಂಬಳ ತಕ್ಕೊಂಡ್ರೆ ಬೇಕೂಂತ ಚಳುವಳಿ ನಡಿಸಬೇಕು ಇನ್ನಷ್ಟೆ. ಈಶ್ವರ! ಹೇಳೋ ಪ್ರಿನ್ಸಿಪಾಲಿ (Principal) ಗೇ ನಮ್ಮಪ್ಪನಿಗೆ, ಗತೀಇಲ್ಲಾ, ತೀರ ಬಡವಾಂತ. ಫ್ರೀಷಿಪ್ (Freeship) ಬೇಕೂಂತ ನೀನು ಬಾಯಿ ಬಿಟ್ರಿಲ್ಲವೆ? ಮರ್ಯಾದೆ ಬೇರೆ ಬಾಧಿಸುತ್ತೆ ನಿನಗೇ" ಅಂತಾನೆ.

ಪುರುಷೋತ್ತಮ್! ಯಾವುದನ್ನು ಕೇಳ್ಲಿ ಹೀಗೇ ಅನ್ನುತ್ತಾನೆ ಅಪ್ಪ. ಅದೇನು ಕೊಂಡು ಹೋಗ್ತಾನೋ ಗೊತ್ತಿಲ್ಲಾಪ್ಪ. ಅಮ್ಮನಿದ್ದಾಗ ಜಗಳಕಾಯ್ತಾ ಇದ್ಲು ಅಪ್ಪನೊಂದಿಗೆ. "ಮಕ್ಕಳನ್ನು ಗೋಳಾಡಿಸಬೇಡಿ. ಅವರ ಮನಸ್ಸನ್ನು ನೋಯಿಸಬೇಡಿ. ನಾಳೇ ಅವರೇ ಸಂಪಾದಿಸುತ್ತಾರೆ. ಆಗ ಬಂದು ನಿಮ್ಮನ್ನ ಕೇಳ್ತಾರೆಯೋ? ಏನೋ ನಿಮ್ಮಧೀನದಲ್ಲಿರೋವರೆಗೂ ಕೇಳ್ತಾರೆ-ಅಷ್ಟೆ! ಹೊಟ್ಟೇಲಿ ಹುಟ್ಟಿದ ಮಕ್ಕಳಿಗೂ ಮಾಡದೆ ಇನ್ಯಾರಿಗೆ ಎತ್ತಿಡಬೇಕು?'' ಅಂತ. ಆದಕ್ಕಾಗಿ ಅಮ್ಮನು ಎಷ್ಟೋ ದೆಬ್ಬೆಗಳನ್ನು ಸಹ ತಿಂದಿದ್ದಾಳೆ ಅಪ್ಪನ ಕೈಯ್ಯಲ್ಲಿ. ಬಹು ಒಳ್ಳೆ ಪ್ರಾಣಿ! ಹಾಗೂ ಅಪ್ಪನಿಗೆ ತಿಳೀದೇ ಎತ್ತಿಕೊಟ್ಟು ಎತ್ತಿಕೊಟ್ಟು ನಮ್ಮನ್ನು ಸುದಾರಿಸ್ತಾ ಇದ್ಳು.

ಪು:--ಈಶ್ವರಾ! ತಿಳಿಯಿತು. ಈಗ ತಿಳಿಯಿತು. ಈ ವಿಷಯವೆಲ್ಲಾ ಇಷ್ಟು ಸ್ಪಷ್ಟವಾಗಿ ತಿಳೀದಪ್ಪಾ ನನಗೆ. ಬಹಳ ಕಷ್ಟ ಕಾಣೋ ಈಶ್ವರ್!

ಈ:—ಅಯ್ಯೋ ಪುರುಷೋತ್ತಮ್! ಇನ್ನೂ ಏನು ಬಲ್ಲೆ? ನಾಲ್ಕನೇ ವರ್ಷದಲ್ಲಿ ಅಮ್ಮನು ಸತ್ತುಬಿದ್ದಿದ್ದಾಳೆ! ಶವ ಹೊರುವ ಕೂಲಿ ಎಂಟು ರೂಪಾಯಿ ಕೇಳಿದ್ರು. ನಾಲ್ಕು ರೂಪಾಯಿಗಳ ಮೇಲೆ ಒಂದು ಬಿಡಿ

ದಮ್ಮಡಿ ಕೊಡೋದಿಲ್ಲಾಂತ ಜಗಳಾ ಅಪ್ಪಂದು. ಬಂದು ಸೇರಿದವ ರೆಲ್ಲಾ ಮೊಖ ಮೊಖ ನೋಡಿಕೊಂಡ್ರು. ಅಪ್ಪಾ "ಹೀಗೆಲ್ಲಾ ಮಾಡ ಬಾರದಮ್ಮಾ" ಅಂತ ಶ್ಯಾಮರಾಯ ಮಾವ ಹೇಳ್ತಾನೇಂತಂದ. "ದುಡ್ಡಿನ ಕಷ್ಟ ಅವನಿಗೇನು ಗೊತ್ತು? ಅವರಪ್ಪನಿಗೇನು ಗೊತ್ತು? ನೀನಡಿಯೋ ಆಚೇಗೇ ಇರಲೀ" ಅಂತಂದ. ಸರಿ. ಸ್ಮಶಾನಕ್ಕೆ ಹೋದ್ರು. ಶವ ಸಂಸ್ಕಾರ ನಡೀಬೇಕಲ್ಲಾ! ಬೆರಣಿ ಲೆಕ್ಕ ಸರೀ ಇಲ್ಲ. ಕೊಸರು ಹಾಕ ಲಿಲ್ಲ. ಲೆಕ್ಕ ಐದುಕಾಸು ವ್ಯತ್ಯಾಸ ಬರುತ್ತೇಂತ ಬೆರಣೀನ್ನೆಲ್ಲಾ ತಿರುಗಿಸೀ ತಿರುಗಿಸೀ ಎಣಿಸ್ದ. ಕೊನೆಗೆ–ಆ ಹೆಂಗಸನ್ನ ನೋಡಿ– "ಐದುಕಾಸು ನಿಮ್ಮಪ್ಪಂದಲ್ಲ. ದುಡ್ಡಾನ್ನೋದು ಬಿಟ್ಟೀ ಬಿದ್ದಿಲ್ಲ. ನಡೀ ಆಚೆಗೆ" ಅಂತಂದ. ಅಯ್ಯೋ ಕಾರ್ಪಣ್ಯವೇ! ಅವ್ಳನ್ನೆಂದರೆ ಸಾಕ್ಷಾತ್ ದಯೆಯ ಅವತಾರ! ಅವಳ ಸಂಸ್ಕಾರಕ್ಕೆ ಇಷ್ಟೊಂದು ಕಾರ್ಪಣ್ಯ! ಸರಿ ಆಮೇಲೆ ದಿವಸದ ಕರ್ಚು ಬೇರೆ ಬಂತಲ್ಲಾ ಅಂತ ಗೋಳಾಡಿದ. ಅತ್ತೂ ಅತ್ತೂ ಬ್ರಾಹ್ಮಣರಿಗೆ ಊಟ ಇಟ್ಟ. ಆಯಿತು. "ತಿಂಗಳು ತಿಂಗಳಿಗೂ ಇಪ್ಪತ್ತು ರೂಪಾಯಿ ಮಾಸೀಕದ ಕರ್ಚು ಬೇರೆ ತಲೇಗೆ ಕಟ್ಟಿತಲ್ಲಾಪ್ಪಾಂತ" ಊರೆಲ್ಲಾ ಹೇಳ್ಕೊಂಡು ತಿರುಗಿದ. "ತಿಥಿ ಕರ್ಚು ಬಂದೊದಗಿಬಿಟ್ಟು ನನ್ನನ್ನ ಸಾಲಗಾರ ನಾಗಿ ಮಾಡ್ಬಿಟ್ಟೆಯಲ್ಲೋ ದೇವರೇ" ಅಂತ ಕೊರಗ್ಬಿಟ್ಟ! ಅಂತೂ ಅವ್ಳು ಇದ್ದು ಸುಖವಾಗಿ ಬಾಳಲಿಲ್ಲ. ಸತ್ತಮೇಲೂ ಅಪ್ಪನ ಶಾಪ ಹರೀಲಿಲ್ಲ ಅವಳಿಗೆ. ಏನು ವಿಚಿತ್ರ ಪ್ರಪಂಚಾನೋ ಇದು ಪುರುಷೋ ತ್ತಮಾ!

ಪು:—ಕೇಳುವಾಗಲೇ ಹೇಗಾಗುತ್ತೆ ಗೊತ್ತೆ? ಹೋಗಿ ನಿಮ್ಮಪ್ಪನ್ನ ಈಗಲೇ ಕೊಲೆ ಮಾಡಿಬಿಡಲೇ ಅಂತ ರಕ್ತ ಕುದೀತಾ ಇದೆ ನೋಡು. ಈ ಮತಿಗೇಡಿ ಕಿರಾತಕರೂ-ದುಡ್ಡೇ ದೇವರೂ ಅಂತ ಭಾವಿಸುವ ಛಂಡಾ ಲರೂ, ಅಪ್ರಯೋಜಕರೂ-ಇದ್ದಾರೆ ನೋಡು! ಇವರಿಗೆ ಮಕ್ಕಳಿಲ್ಲ, ಮನೆಯಿಲ್ಲ, ಹೃದಯ ಇಲ್ಲ, ಬಂಧುಗಳಿಲ್ಲ, ಕಷ್ಟಪಡೋವರನ್ನು ನೋಡಿ ದರೆ ಮೊದಲೇ ಜೀಡವಾಗಿದೆ. ಇವರೂ ಇದ್ದಾರೆ ಸೊಸೈಟಿ

(Society) ಯಲ್ಲಿ ಮನುಷ್ಯರೂಂತ! ಮೃಗಮುಂಡೇವು! ಇಂಥಹ ವರಲ್ಲಿ ದಯೆ, ದಾಕ್ಷಿಣ್ಯ ನೋಡಬಾರದು ಈಶ್ವರ್ !

ಈ:—ಒಂದು ದಿವಸ ನನಗೂ ಬಹಳ ಬೇಜಾರಾಯಿತು ನೋಡು. ಪುರುಷೋತ್ತಮ್ ! ಅಷ್ಟಿಷ್ಟಲ್ಲ. ಕೋಪ ಅನ್ನೋದು ಉಕ್ಕಿ ಬಂತು. ಏನಷ್ಟಲ್ಲದೆ? ಯಾವುದನ್ನು ಕೇಳಲಿ ಪುರುಷೋತ್ತಮ್ ! ಈಗೇನಂತಾನೆ ಅಂದ್ರೆ "ನಿನಗೆ ನರಹರಿಶಾಸ್ತ್ರಿಗಳ ಮಗಳನ್ನ ಕೊಟ್ಟು ಮದುವೆ ಆಗಲಿ ತಡಿಯೋ ಈಶ್ವರ! ಎಲ್ಲಾ ಅವರೇ ಕೊಡ್ತಾರೆ. ಏನು ಬೇಕಾದರೆ ಅದು! ಧರ್ಮಕ್ಕೆ ಮಾಡ್ತಾರೆಯೋ ? ಮಗನನ್ನು ಹೆತ್ತು ಇಪ್ಪತ್ತೆರಡು ವರ್ಷ ಸಾಕಿ, ಸಲಹಿ, ಕಾಲೇಜಿನಲ್ಲಿ ಓದಿಸಿಕೊಡಲಿಲ್ಲವೇ ರತ್ನದಂತಾ ಮಗನ್ನ? ಅಳಿಯಾಂದ್ರೆ ಬಿಟ್ಟಿ ಆಗಿಹೋಯಿತೇನೋ" ಅಂದ. ನಾನಂದೆ "ಅಪ್ಪಾ! ಹೆಣ್ಣಿನ ಕಡೆಯವರಿಗೆ ನನ್ನನ್ನು ಮಾರಬೇಡ. ನಿನ್ನ ಮಗನಾಗಿ ಹುಟ್ಟಿ ಅನುಭವಿಸಿದ ಸುಖ, ಸ್ವಾತಂತ್ರ್ಯ, ಎಲ್ಲಾ ಸಾಕು. ಇನ್ನು ಮಾವನ ಮನೇಲಿ ಬೇರೆ ದಾಸಾನುದಾಸನಾಗಿ ಇರಬೇಕೇನೋ ? ಇಪ್ಪತ್ತೆರಡು ವರ್ಷ ಪಾರತಂತ್ರ್ಯದಲ್ಲಿ ಕಳೀತು ಪಾಪಿ ಜೀವನ! ಆಯುಷ್ಯಾಂತವೂ ಇನ್ನೂ ಒಬ್ಬರ ಕೈಕೆಳಗಿರೋದು ಬೇಡ. ಅವರ ಹಣಕ್ಕೆ ಕೈ ಒಡ್ಡಿ ಅವರ ಎಂಜಲನ್ನು ಅಂಗಲಾಚಿ ಬೇಡುವುದು ಬೇಡ. ನೋಡು, ನಿನ್ನಿಷ್ಟವಿದ್ದು ಏನನ್ನಾದರೂ ಕೊಡಬಹುದೂಂತ ನಿನಗೂ ದೊಡ್ಡ ಮನಸ್ಸು ಹುಟ್ಟಿದ್ರೆ ಏನೋ ಕೊಡಬಹುದಾದ್ದನ್ನು ಕೊಡು. ನನಗೂ ಸಾಕಾಗಿಹೋಗಿದೆ. ನಾನೂ ವಯಸ್ಸಾದವನು. ಕಾಲೇಜಿನಲ್ಲಿ ಓದ್ತಾ ಇದ್ದೇನೆ. ಏನೋ ನಿನ್ನ ದಯದಿಂದ ಅಷ್ಟಿಷ್ಟು ನಾಗರಿಕ ಕಲಿತುಕೊಂಡಿದೇನೆ. ನಾಲ್ಕು ಜನ ಗೌರವಸ್ಥರ ಮಧ್ಯದಲ್ಲಿ ನಾಣ್ಯವಾಗಿ ಬಾಳಬೇಕೂಂತ ನನಗೂ ಸಹಜವಾದ ಇಚ್ಛೆ ಇದೆ" ಅಂತಂದ್ರೆ–"ಲೋ, ಈಶ್ವರ! ನಿನ್ನ ತಲೇಲಿ ಪಿಶಾಚಿ ಬಡಿದಿದೆ ಈವತ್ತು! ಮುಚ್ಚ್ಕ [illegible] ಹರವಬೇಡ! ನಿನ್ನ ನಾಗರಿಕಕ್ಕೆ ಬೆಂಕಿ ಹಾಕಿನ್ನು! ದುಡ್ಡು [illegible]ಡೋದಕ್ಕೆ ಎಷ್ಟು ಬೇಕೋ ಅಷ್ಟೂ ಇವೆ ನಾಗರಿಕ ನಿನಗೆ! ನನ್ನ ಹತ್ತಿರ ಏನೂ ಇಲ್ಲ.

ನಿನಗೆ ಬೇಕಾದ್ದು ಮಾಡಿಕೋ'' ಅಂದ. ನಾನಂದೆ, ಅಪ್ಪಾ! ನೀನು ನನ್ನ ತಂದೆ! ಜನ್ಮದಾತ! ನನ್ನ ಪರಿಪೋಷಣೆಯು ನಿನಗೆ ಸೇರಿದ ಅವಶ್ಯ ಕರ್ತವ್ಯ! ಹಾಗಿರುವಾಗ ನಿನಗೇ ನನ್ನ ಕ್ಷೇಮವು ಬೇಡವಾಗಿದ್ದಲ್ಲಿ ಇನ್ನು ಯಾರಿಗೆತಾನೇ ಬೇಕಾಗಿರುತ್ತೆ? ಈ ಅಸಹ್ಯ ಜೀವನವನ್ನು ನಡೆಯಿಸೋದಕ್ಕೆ ನನ್ನಿಂದ ಸಾಧ್ಯವಿಲ್ಲಾಪ್ಪಾ! ಅಮ್ಮನ್ ಹೋದ ದಾರಿ ನಾನೂ ಹಿಡೀತೀನಿ ಅಂತ ಹೊರಟೆ. ಕರೆದ ''ಲೋ ಈಶ್ವರಾ! ಇಲ್ಲಿ ಬಾರೋ'' ಅಂತ. ಹೋದೆ. ''ನೋಡು. ಈಗತಾನೆ ನಿಮ್ಮಮ್ಮ ಸತ್ತು ಮೂರು ವರ್ಷ ಆಗಲಿಲ್ಲ. ತಿಥಿ ಕರ್ಮಗಳಿಗೆ ಮಾಡಿದ ಸಾಲ ಇನ್ನೂ ತೀರಲಿಲ್ಲ. ಇನ್ನು ನಿನ್ನ ಪಿಂಡದ ಕರ್ಚು ಬೇರೆ ನನ್ನ ತಲೆಮೇಲೆ ಹೊರಿಸಬೇಕೂಂತಲೇನೋ? ನಾನೇ ಹೋಗಿ ಎಲ್ಲಿಯಾದ್ರೂ ಕೆರೆ ಬಾವೀಲ್ಲಿ ಬಿದ್ದು ಸಾಯ್ತೀನೆ. ನಾನಿರೋದೇ ನಿಮಗ್ಯಾರಿಗೂ ಸಹಿಸಲಿಲ್ಲ.'' ಅಂತಂದ.

ಪುರು:—ಸರಿ, ಇದೀಗ ಬಹಳ ಸ್ವಾರಸ್ಯವಾಗಿದೆ. ಆಮೇಲೆ?

ಈ:—ಆಮೇಲೆ ನಾನಿದ್ದವನು, ಈ ಜಿಪುಣನ ಹತ್ತಿರ ನನ್ನ ಬೆದರಿಕೆ ಏನೇನೂ ನಡೆಯೋಹಾಗಿಲ್ಲ. ಇನ್ಯಾಕೆ ಸುಮ್ಮನೆ? ಇವನೆಲ್ಲಿಯಾದರೂ ಹೋಗಿ ನೇಣು ಹಾಕ್ಕೊಳ್ಳೋದು. ಆಮೇಲೆ ಪಿಶಾಚಿ ಗಿಶಾಚಿಯಾಗಿ ಬಂದುಬಿಟ್ರೆ ಏನುಗತಿಯೋ ದೇವ್ರೇಂತ, ''ಹೋಗ್ಲಿ ಬಿಡಪ್ಪ. ಹಣೇಲಿ ಬರೆದಿದ್ದಂತೆ ಆಗಲಿ. ಹಣೇಲಿ ಬರೀದೇ ಇರೋದು ಹೊಡಕೊಂಡ್ರೂ ಬರೋದಿಲ್ಲಾ''ಂತ ಸುಮ್ಮನಾದೆ.

ಪುರು:—ಎಲ್ಲಾ ವಿಧಿ! ಅಷ್ಟಲ್ಲದೇನೋ ಈಶ್ವರ್?

ಈ:—ಇದೆಲ್ಲಾ ಹೋಗಲಿ. ಹೋದವರುಷ ಫೈನಲ್ ಪರೀಕ್ಷೆ (Final Examination) ಆಯಿತಲ್ಲಾ-ಅದಕ್ಕೆ ಸರಿಯಾಗಿ ಶಿವರಾಮಯ್ಯನವರ ಮನೇಲಿ ಅವರ ಮಗಳ ಮದುವೆ. ನಮ್ಮಪ್ಪ ಇದ್ಕೊಂಡು, ''ನಾಗೂ! ಈ ಐದು ದಿವಸವೂ ಮನೇಲಿ ಅಡಿಗೇ ಮಾಡೋದು

ಬೇಡ. ಎಲ್ಲರೂ ಅವರ ಮನೇಗೇ ಊಟಕ್ಕೆ ಹೋಗೋಣ" ಅಂದ. ಪರೀಕ್ಷೆ ಹೊತ್ತಿಗೆ ಊಟಾ ಆಗುತ್ತೇನೋ ಪುರುಷೋತ್ತಮ್ ?

ಪುರು:—ಎಲ್ಲಿ ಬರಬೇಕಪ್ಪಾ ?

ಈ:—ಸರಿ, ಅಪ್ಪನಿದ್ದವನು "ಬೆಳಿಗ್ಗೆ ಮದುವೇ ಮನೇಲಿ ಇಡ್ಲಿ ಎಲ್ಲಾ ತಿಂದುಕೊಂಡು ಹೋಗು. ಸಂಜೇಗೆ ಬಂದಮೇಲೆ ಮದುವೇ ಮನೇಲ್ಲೇ ಊಟ ಮಾಡ್ತೀಯಂತೆ" ಅಂತಂದ. ಇದರ ಮೇಲೆ ಮುಹೂರ್ತದ ದಿವಸ. ಹತ್ತು ಗಂಟೆಗೆ ಪರೀಕ್ಷೆ. ಒಂಭತ್ತೂವರೆಗಂಟೆ ಆಗಿದೆ. ಆಗ ಅಪ್ಪ ನನ್ನ ಕರೆದ. ಕಿವಿಯಲ್ಲಿ ಹೇಳಿದ ಪಿಸಪಿಸಾಂತ "ಲೋ ಈಶ್ವರ! ಮುಹೂರ್ತದ್ದು ಒಟ್ಟು ಐದು ತೆಂಗಿನ ಕಾಯಿ ಬಂದಿದೇ. ಇಲ್ಲೇ ಇದ್ರೇ ಊಟದ ಹೊತ್ತಿನಲ್ಲಿ ಯಾರಾದ್ರೂ ಹೊಡೆದು ಬಿಡ್ತಾರೆ. ಮುದ್ದನೂ ಇಲ್ಲ. ಈ ತೆಂಗಿನಕಾಯಿ ತೆಕ್ಕೊಂಡು ಹೋಗಿ ಮನೇಲ್ಲಿ ಹಾಕ್ಬಿಟ್ಟು ಕಾಲೇಜಿಗೆ ಹೋಗೂ" ಅಂದ ನನಗ ಬಂದ ಕೋಪ ಅಷ್ಟಿಷ್ಟಲ್ಲ ನೋಡು. ಸರಿಯಂತ ತೆಂಗಿನಕಾಯನ್ನ ಕೈನಲ್ಲಿ ತಗ್ಕೊಂಡೆ. ಬೀದಿ ಬಾಗಿಲಿಗೆ ಹೋದೆ. ಮೋರೀಲ್ ಹಾಕಿದೆ ದಢುಂ ಅಂತ. ನಡೀತಾ ಇದ್ದೆ ಕಾಲೇಜಿಗೆ. ಅಪ್ಪನಿಗೆ ಸಂಶಯ. ಬಂದ ಹಿಂದುಗಡೇಯಿಂದ. ತೆಂಗಿನಕಾಯಿ ತೆಗೆದ ಮೋರಿಯಿಂದ; ತೊಳೆದುಕ್ಕೊಂಡು ಹೋಗಿ ಮನೇಲಿ ಹಾಕಿದನಂತೆ. ಸರಿ ಸಾಯಂಕಾಲ ಬಂದೆ ಮನೇಗೆ ಆಯಿತು ತಕ್ಕ ಶಾಂತಿ! ಮಾರನೇದಿವಸ ಪರೀಕ್ಷೆ ಬೇರೆ. ಕೈಯಲ್ಲಿ ಹಿಡಿದೆ ಪುಸ್ತಕವನ್ನ. ಕಣ್ಣೆಲ್ಲಾ ಮಂಜುಮಂಜಾಯಿತು. ಸಾಕಪ್ಪಾ ಸಾಕು. ಸಾಕೋಪುರುಷೋತ್ತಮ!

ಪುರು:—ಈಶ್ವರ! ಗೊತ್ತಾಯಿತು. ನಿನ್ನ ಚಿಂತೆ! ಅಹುದು ನಿನ್ನದು ಬಹು ನಿಕೃಷ್ಟ ಜೀವನ! ಒಪ್ಪಿಕೊಳ್ಳತಕ್ಕದೇ. ಇಷ್ಟು ದಿವಸವೂ ನನಗಿದೆಲ್ಲಾ ಹೇಳಲಿಲ್ಲವಲ್ಲಪ್ಪಾ! ನೀನು.

ಈ:—ಏನುಹೇಳಿ ಹಾಳಾಗುವುದು ಪುರುಷೋತ್ತಮ್! ಒಂದೇ ಎರಡೇ ಆಪತ್ತುಗಳು? ಹೋದನವರಾತ್ರಿಯಲ್ಲಿ ನನಗೆ ಮಲೇರಿಯಾಜ್ವರ!

ಅಷ್ಟಿಷ್ಟಲ್ಲ. ಡಾಕ್ಟರನ್ನು ಕರೆಯಿಸಪ್ಪಾ ಅಂದೆ. "ಡಾಕ್ಟರ್ (Doctor) ಯಾಕೋ ಈಶ್ವರ? ಪೂರ್ವಕಾಲದಲ್ಲೆಲ್ಲಾ ಮನೆ ಮನೆಗೂ ಡಾಕ್ಟರಿದ್ದರೇನೋ?" ಅಂದ. ಇಲ್ಲಾಪ್ಪಾ! ಜ್ವರ ಬಂದರೆ ತಡಿಯೋಕ್ಕಾಗೋಲ್ಲ. ಸ್ಟಡೀಸ್ (Studies) ಎಲ್ಲಾ ಕೆಟ್ಟು ಹೋಗುತ್ತೆ. ಇವತ್ತು ಸ್ವಲ್ಪ ಜ್ವರ (Temperature) ಇಳಿದಿದೆ, ಒಂದು ಕ್ವೈನೈನ್ ಇಂಜಕ್ಷನ್ (Quinine Injection) ತೆಗೆದುಕೊಳ್ತೀನಿ ಅಂದೆ. "ಕ್ವೈನೈನ್ (Quinine) ಯಾಕೋ ಈಶ್ವರಾ! ಕ್ವೈನೈನ್ ಬೇಡವೋ, ಕಿವಿಮುಚ್ಚಿ ಹೋಗುತ್ತೆ" ಅಂದ. ಕಿತ್ತಳೆ ಹಣ್ಣು ಅಂದೆ. "ಇದು ಕಾಲವಲ್ಲಾ ಕಾಣೋ, ದರ್ಜಿ ಆರಾಣೆ ಹೇಳ್ತಾರೆ" ಅಂದ. ಮತ್ತೆ ಡಾಕ್ಟರ್ (Doctor) ಅಂದೆ. "ಅವರು ಬಂದ್ರೆ ಬಹಳ ಫೀಸು (Fees) ಕೇಳ್ತಾರೆ" ಅಂದ. ಏನು ಮಾಡಲೋ ಅಪ್ಪಾ! ಈ ಬೇನೆ ತಾಳಲಾರೆನಲ್ಲೋ, ಅಮ್ಮನಿದ್ದಿದ್ರೆ ಅವಳ ಮಡಲಿನಲ್ಲಿಯಾದರೂ ಬಿದ್ದು ಸಾಯ್ತಾ ಇದ್ನಲ್ಲಾ ಅಂದೆ. "ಹುಚ್ಚು ಹುಚ್ಚಾಗಿ ಹರಟಿ ತಲೆಕೆಡಿಸಿಕೊಳ್ಳಬೇಡವೋ ಈಶ್ವರಾ! ನಿನಗೆ ಪಿತ್ತ ಅಧಿಕವಾಗಿದೆ" ಅಂದ. ಏನುಮಾಡಲಪ್ಪಾ ದೇವರೆ! ಅಂತ ನರಳಿದೆ. "ನಾಗೂಗೆ ಹೇಳಿ ಶುಂಠಿ ಕಷಾಯಮಾಡಿಸಿ ಕುಡಿಯೋ ಎಲ್ಲಾ ಗುಣವಾಗುತ್ತೆ" ಅಂದ. ಅಯ್ಯೋ, ಪುರುಷೋತ್ತಮ! ನನ್ನ ಬಾಳೋ! ನನ್ನ ಗೋಳೋ!

ಪುರು:—ಈಶ್ವರ! ಜಿಪುಣರಿಗೆ ಮನೆ, ಮಠ, ಮಕ್ಕಳು, ದೇವರು, ಬಂಧು, ಬಳಗ, ಊಟ, ನಿದ್ರೆ, ಸಂತೋಷ, ಎಲ್ಲಾ ದುಡ್ಡಿನಲ್ಲಿದೆ. ಅವರಿಗೆ ಏನು ಹೇಳುವುದೂ ಸುಖವಿಲ್ಲ. ಬಸವನ ಮುಂದೆ ಶಂಖ ಬಾರಿಸಿದ ಹಾಗೆಯೇ ನೋಡು. ಏಳಪ್ಪಾ ಈಶ್ವರ? ಇಂದಿಗೆ ಇಷ್ಟಕ್ಕೆ ಸಾಕೋ ಜಿಪುಣರ ಸ್ಮರಣೆ! ಈ ಹೊತ್ತನ್ನು ದೇವರ ಸ್ಮರಣೆಯಲ್ಲಿ ಕಳೆದಿದ್ದರೆ ಜನ್ಮವಾದರೂ ಸ್ವಲ್ಪ ಸಾರ್ಥಕವಾಗುತ್ತಾ ಇತ್ತು.

ಈ:—ಅಷ್ಟಲ್ಲದೆ ಏನು ಪುರುಷೋತ್ತಮ್? ನೀನು ಕೇಳಿದೆಯಲ್ಲಾ ಅಂತ ಹೇಳಿದೆ. ಹೆತ್ತ ತಂದೆಯನ್ನು ದೂಷಿಸಬೇಕು. ಏನು ಮಾಡುವುದು? ವಿಧಿಯಿಲ್ಲ.

ದೃಶ್ಯ ೫]                                        [ಸ್ಥಾನ: ಗಂಗಾಧರನ ಮನೆ

[ಪಾತ್ರಗಳು:- ಗಂಗಾಧರ: ನಾಗು, ಮುದ್ದ, ಸಂಗಪ್ಪ (ಸಾಲಗಾರ)]

ಗಂ:—ನಾಗೂ ! ನಾಗೂ !

ನಾಗು:—(ಪ್ರವೇಶಿಸಿ) ಏನು ಕೂಗಿದ್ರಲ್ಲಾ ?

ಗಂ:—ಇವತ್ತು ಮನೇಲಿ ಅಡಿಗೇ ಇಲ್ಲಾ. ಹೆಣ್ಣಿನಕಡೇವರದೇ ಎಲ್ಲಾ. ಅಲ್ಲೇ ಹೋಗಬೇಕು ಎಲ್ಲರೂ.

ನಾಗು:—ಸರಿ ಹಾಗಾದರೆ. ಈಗತಾನೇ ಒಲೆ ಹೊತ್ತಿಸೋಣಾಂತಿದ್ದೆ.

ಗಂ:—ಬೇಡ ಬೇಡ. ಅಂದಹಾಗೆ ನಾಗೂ! ನೋಡಿದೆಯಾ ಮರೆತೇಬಿಟ್ಟಿದ್ದೆ ! ನಿನ್ನ ಮಗನಿಗೆ ಒಂದಂಗಿ, ಎರಡು ಷರಟು, ಎಲ್ಲಾ ಹೊಲಿಸ್ಕೊಳ್ಳುವುದು ವೇಗೆ, ಇಂದಾ (ಎಂದು ಎರಡು ರೂಪಾಯಿಗಳನ್ನು ಕೊಡುವುದಕ್ಕೆ ಹೋಗುವನು.)

ನಾಗು:—ಎರಡು ರೂಪಾಯಿ ಯಾವ ಮೂಲೇಗೇಂಪ್ರಿ ? ಅವತ್ತೇ ಹೇಳಿದ್ನಲ್ಲಾ ಹತ್ತು ರೂಪಾಯಾದರೂ ಬೇಕು ಈ ತಿಂಗಳಲ್ಲಿ ಅಂತ !

ಗಂ:—ಸಾಧ್ಯವಿಲ್ಲ ನಾಗೂ! ಈ ಮದುವೆ ಕರ್ಚು ನನಿಗೆ ಮಿತಿ ಮಿಂಚಿಹೋಗಿದೆ ನಾನೂ ಸಾಲಗಾರನಾಗಿ ಹೋಗ್ತೇನೆ ನೋಡು.

ನಾಗು:—ಅಲ್ಲ ಭಟ್ಟರೆ! ನನಗೆ ಉಡೋಕೆ ಒಂದು ಸೀರೆಯೂ ಇಲ್ಲ ನೆಟ್ಟಗೆ. ಹೆಂಗಸೂ ಅಂತ ಹುಟ್ಟಿ ಬೆತ್ತಲೇ ವೈಯಲ್ಲಿರೋಕಾಗುತ್ತೆಯೇ ಹೇಳಿ ಮತ್ತೆ?

ಗಂ:—ನಾಗೂ! ಈಗ ಹೇಗಾದ್ರೂ ಸುದಾರಿಸಿಕೋ. ಮದುವೇ ಮುಗೀಲಿ. ಮುಂದಿನ ತಿಂಗಳು ಬೇಕಾದ್ರೆ ಕೊಡ್ತೇನೆ. ಎಲ್ಲಿ ಓಡಿಹೋಗುತ್ತೆ ?

ನಾಗು:—ಸರಿ ಸರಿ. ಈ ವೇಳೆಗೆ ಮುವ್ವತ್ತು ಸಲ ಹೇಳಿದಿರಿ ಹೀಗೇಂತ. ಹೋಗಲಿ ನನ್ನ ಹಣಾನ್ನಾದರೂ ಕೊಟ್ಟುಬಿಡಿ. ನಾನು ಹಾಳಾಗಿ ಹೋಗ್ತೇನೆ ಅತ್ಲಾಗೆ ನಿಮಗ್ಯಾಕೆ ನನ್ನ ತೊಂದರೆ? ಮದುವೆ ವೈಭವ ನಿಮಗೆ. ದೊಡ್ಡಮನುಷ್ಯರ ಹೆಣ್ಣು ಮನೇಗೆ ಬರ್ತಾಳೆ, ಬೇಕಾದ್ದೆಲ್ಲಾ ತರ್ತಾಳೇಂತ. ನನ್ನ ದುಃಖ ನನಿಗೆ, ನಿಮ್ಮ ಸೊಸೇನ್ನ

ಇಟ್ಕೊಂಡು ನಡಿಸ್ಕೊಳ್ಳಿ ನಿಮ್ ಸಂಸಾರಾನಾ. ನನ್ನ ತಗಾದೆಯೇ ಮುಗಿದುಹೋಗುತ್ತೆ.

ಗಂ:—ಇದೇನು ನಾಗೂ ? ಇಷ್ಟು ದಿವಸ ತಾಯಿಲ್ಲದ ಮಕ್ಕಳಿಗೆ ತಾಯಾಗಿದ್ದೆ. ಸಂಸಾರಾನೆಲ್ಲಾ ನಡೆಯಿಸ್ದೆ. ಮದುವೆ ನಾಳೇಂದ್ರೆ ಇವತ್ತು ಬಿಟ್ಟು ಹೊರಟುಹೋಗ್ತೀನೀಂತ ಅಂತೀಯಲ್ಲಾ. ಆ ಮಕ್ಕಳು ನೊಂದುಕೊ ಳ್ಳೋಲ್ವೇ ? ಇದೇನು ನ್ಯಾಯ ನಾಗೂ ? ಜನಗಳಾದ್ರೂ ಒಪ್ಪುತಾ ರೆಯೇ ? ಏನಂಥಾ ಕಷ್ಟಾ ಬಂದಿದ್ದು ಈ ಮನೇಲಿ ನಿನಗೇ ?

ನಾಗು:—ಹೌದೂಂದ್ರೆ ಒಪ್ಪೋದಿಲ್ಲ ! ಹರುಕುಸೀರೆ ಉಟ್ಕೊಂಡು ಮದು ವೇ ಮನೆಗೆ ಹೋದ್ರೆ ಆಗ ನಗೋದಿಲ್ವಾ !

ಗಂ:—ನಾಗೂ ! ನಿಂಗ್ಹುಚ್ಚು ! ಗಂಡಸತ್ತವಳು ನೀನು ಹೊಸಸೀರೆ ಉಟ್ರೆ ಆಗ ಜನಗಳು ನಿನ್ನನ್ನು ನೋಡಿ ನಗತಾರೆ ನಿಜ !

ನಾಗು:—ಸಾಕು, ನಿಮ್ಮ ತರ್ಕ ಇದ್ದೇ ಇದೆ. ಗಂಡಸತ್ತಾಗ-ಏನೂ ದಿಕ್ಕು ದಿವಾಳವಿಲ್ಲದ ಹೆಂಗಸು-ಇದ್ದಬದ್ದದ್ದನ್ನೆಲ್ಲಾ ಮಾರಿ ಒಂದೈನೂರು ರೂಪಾಯಿ ಜೊತೆ ಮಾಡಿ ನಿಮ್ಮ ಹತ್ತರ ತಂದುಕೊಟ್ಟೆ. ಮಾವನ ಮನೇವ್ರು ತಳ್ಳಿದ್ರು ಆಚೇಗೆ. ಇಲ್ಲಿ ಬಂದೆ. ದುಡಿಸಿದರಿ-ಮಿತಿ ಮೇರೆ ಇಲ್ಲದೆ. ಹೊಟ್ಟೇಲಿ ಹುಟ್ಟಿದ ಮಗು ಅದೊಂದು ಅಲೀತಾ ಇದೆ, ದಿಕ್ಕಿಲ್ಲದ ಪರದೇಶಿ-ಬಿಕ್ಷಾನ್ನ ಬೇಡಿಕೊಂಡು. ನಿಮ್ಮನೇಲಿ ದುಡಿ ಯೋದೂಂದ್ರೆ ಹಗಲಿಲ್ಲ, ರಾತ್ರಿಯಿಲ್ಲ. ಇದರಮೇಲೆ ದೂಷಣೆ ಬೇರೆ ಮಾಡ್ತೀರಿ. ಇಷ್ಟು ಕರ್ಚಾಯಿತು. ಅಷ್ಟು ಕರ್ಚಾಯಿತೂಂತ. ಏನೋ ನೋಡಿ. ಮನೆ ಯಜಮಾನಿಯಾದ್ರೂ ಇದ್ರೆ ಕಷ್ಟ ಸುಖ ಹೇಳಕೋಬಹುದಾಗಿತ್ತು. ಆ ಮಹಾತಾಯಿ ನಡೆದು ಬಿಟ್ಳು ನಾನೂ ಹಲ್ಲು ಕಚ್ಚಿಕೊಂಡು ನಾಲ್ಕು ವರ್ಷ ಇದ್ದೆ. ಇನ್ನು ಸಾಧ್ಯವಿಲ್ಲ. ನನ್ನಿಂದ ಸಾಧ್ಯವಿಲ್ಲಾಂದ್ರೆ! ನನ್ನ ಐನೂರು ರೂಪಾಯಿ ಅಸಲು, ಬಡ್ಡಿ, ಸಂಬಳ-ಎಲ್ಲಾ ಲೆಖ್ಖಾನೂ ಪರಿಷ್ಕಾರವಾಗಿ ಫೈಸಲ್‌ಮಾಡಿ ಬಿಡಿ. ನಾನು ಹಾಳಾಗಿ ಹೋಗ್ತೀನಿ.

ಗಂ:—ನಾಗೂ ! ನೋಡು. ಇದು ಚರ್ಚೆಗೆ ಸಮಯವಲ್ಲ. ಹೆಣ್ಣಿನಕಡೆ

ಯವರು ಜೇರೆ ಕರೆಯುವುದಕ್ಕೆ ಬಂದುಬಿಡ್ತಾರೆ. ಅವರೆದುರಿಗೆ ಹೀಗೆಲ್ಲಾ..................

ನಾಗು:—ಬಂದರೇ ಬರ್ತಾರೆ! ನನ್ನ ಹೊಟ್ಟೇ ಉರಿ ನನಗೆ. ನಿಮ್ಮ ಮರ್ಯಾದೆ ನಿಮಗೆ!

ಗಂ:—ಸರಿ ನಾಗೂ! ಈಗೇನು ಮಾಡಬೇಕೂಂತ ನಿನ್ನ ಅಭಿಪ್ರಾಯ?

ನಾಗೂ:—ಅದೇ ನನಗೆ ಬರಬೇಕಾದ್ದನ್ನು ಕೊಟ್ಟುಬಿಡಿ. ಬ್ಯಾಂಕಿನಲ್ಲಿ ಹಾಕ್ಕೋತೇನೆ.

ಗಂ:—ಬ್ಯಾಂಕಿನಲ್ಲಿ ಹಾಕಿದ್ರೆ ಏನು ಬರುತ್ತೆ ನಾಗೂ? ನಿನ್ನ ಹಣ ಬ್ಯಾಂಕಿನಲ್ಲಿದೇಂತ ಯಾರಿಗಾದರೂ ತಿಳಿದ್ರೆ ತಕ್ಷಣ ವಾರಸ್ಸು ಹುಟ್ಟಿಬಿಡ್ತಾರೆ ನೋಡು. ಭದ್ರ!

ನಾಗು:—ಹುಟ್ಟಿಬಿಡ್ಲಿ, ನನ್ನ ಹಣೇಲ್ ಬರೆದಿದ್ದಂತೆ ಆಗಿಹೋಗಲಿ. ನನ್ನ ಅದೃಷ್ಟ. ಇನ್ನು ನನಗೆ ಬೇಕಾದಹಾಗೆ ಮಾಡಿಕೋತೀನಿ. ನಾಯಿ ಜನ್ಮ ನಂದು. ನಾಲ್ಕು ದಿವಸ ಹೊಟ್ಟೆ ಕೂಳಿಗಾಗಿ ಎಲ್ಲಿಯಾದ್ರೂ ದುಡಿದುಬಿಡ್ತೀನಿ. ಈ ವಿಷಯದಲ್ಲಿ ನಿಮಗೆ ಚಿಂತೇ ಬೇಡ. ಕೊಟ್ಟೆಡೀಂದ್ರೆ ಎಲ್ಲಾ ಲೆಕ್ಕಾ ಮಾಡಿ.

ಗಂ:—ಹಾಗೂ ಆಗಲಿ ನಾಗೂ! ನೋಡು, ನಿನ್ನಸುಲು, ಬಡ್ಡಿ ಎಲ್ಲಾ 680 ರೂಪಾಯಿ ಆಗಿದೆ. ಇವರಲ್ಲಿ ನಿನಗೊಂದು 97 ರೂಪಾಯಿ ಕೊಟ್ಟಿದ್ದೇನೆ ಆಗಿಂದಾಗ್ಗೆ. ಜಾತಾ 583 ರೂಪಾಯಿ. ನಿನ್ನ ಸಂಬಳ (ಲೆಕ್ಕದ ಪುಸ್ತಕದಿಂದ ಓದುತ್ತಾನೆ) [illegible] ವರ್ಷಕ್ಕೆ ತಿಂಗಳಿಗೆ ಐದು ರೂಪಾಯಿನಂತೆ.

ನಾಗು:—ಏನೆಂದಿರಿ? ತಿಂಗಳಿಗೆ ಐದೆ? ಎಂಟಕ್ಕೆ ಕಮ್ಮಿ ನನ್ನಿಂದ ಆಗೋದೇ ಇಲ್ಲಾಂತ ನಾನು ಹೇಳಿರಲಿಲ್ಲವೆ ಆವತ್ತೇ? ಇರಲಿ ನೋಡೋಣ ಅಂದಿದ್ರಿ.

ಗಂ:—ನೋಡು ನಾಗೂ! ನನಗೂ ದೇವರಲ್ಲಿ ನಂಬಿಕೇ ಉಂಟು ದಿನಾ ಪೂಜಾಮಾಡೋದು ನೀನೇ ಕಣ್ಣಿಂದ [illegible] ನೋಡ್ತಾ ಇದ್ದೀಯೆ. ಸುಳ್ಳು ಹೇಳುವುದಕ್ಕೆ ಮಟ್ಟಿಗೆ ನನ್ನಿಂದ ಸಾಧ್ಯವಿಲ್ಲ.

ನಾಗು:—ಆದರೆ ನೀವು ಈಗ ಹೇಳ್ತಾ ಇರೋದೆಲ್ಲ ಬಹಳ ಸತ್ಯ ಅಂತಲೋ ?

ಗಂ:—ಅಷ್ಟಲ್ಲದೇನು? ಎಂಟು ರೂಪಾಯಿ ಸಂಬಳ ಅಂತಂದೆ. ನಿಜ. ಆದರೆ ಊಟದ ಖರ್ಚು ಯಾರದೂಂತ? ಸಂಬಳಾನೂ ಕೊಟ್ಟು, ಊಟಾನೂ ಹಾಕಿ ನಾನು ಸಾಲ ಮಾಡಿಕೊಳ್ಳಲೇನು? ಇಲ್ಲ ನಾಗೂ! ನನ್ನಿಂದ ಸಾಧ್ಯವಿಲ್ಲ. ತಿಂಗಳಿಗೆ ಮೂರು ರೂಪಾಯಿ ವಜಾ ಹಾಕಿದ್ದೇನೆ. ನ್ಯಾಯವಾಗಿ ನೋಡಿದ್ರೆ ಐದು ರೂಪಾಯನ್ನೇ ವಜಾ ಹಾಕಬೇಕಾಗಿತ್ತು. ಏನೋ ಪಾಪ! ನನ್ನ ಹಾಗೇ ನೀನೂ ಬಡವಳೂಂತ......

ನಾಗು:—ಭಟ್ಟರೆ! ಸರಿ. ನನ್ನ ಪುಣ್ಯಕ್ಕೇನೂ ಕೊರತೆಯಿಲ್ಲ. ಈಗ ತಿಳೀತು. ಹೋಗಲಿ ಲೆಕ್ಕಾ ಹೇಳಿ ಮುಂದಕ್ಕೆ.

ಗಂ:—ನೋಡು ನಾಗೂ! ಎಲ್ಲ ಇಲ್ಲೇ ಬರೆದಿಟ್ಟಿದ್ದೇನೆ. ನನ್ನ ತಲೆ ಒಡೆದ್ರೂ ನನ್ನಿಂದ ಸುಳ್ಳು ಹೇಳೋದಕ್ಕೆ ಬರೋದಿಲ್ಲ. ಮೋಸಗೀಸ ನನ್ನಿಂದ ಸಾಧ್ಯವಿಲ್ಲ..... .... .. .....

ನಾಗು:—ಅದು ಹೋಗಲಿ-ಲೆಕ್ಕ ಹೇಳೀಂದ್ರೆ.

ಗಂ:—ನೋಡು. ನಾಲ್ಕು ವರ್ಷಕ್ಕೆ ಸಂಬಳ 240 ರೂಪಾಯಾಯಿತು. ಅದರಲ್ಲಿ ನೀನು ಹೊರಗಾಗಿ ಅಡಿಗೆ ಮಾಡದೆ ಇದ್ದದ್ದು 144 ದಿವಸ. ಇತರರ ಮನೇಲ್ಲಿ ಮದುವೆ, ಮುಂಜಿ, ತಿಥಿ, ಕರ್ಮ, ಹುಟ್ಟಿದ ಹಬ್ಬ, ಗೃಹಪ್ರವೇಶ, ಇತ್ಯಾದಿ ಕಾರಣಗಳಿಂದ ನಮ್ಮ ಮನೇಲಿ ಅಡಿಗೇ ಮಾಡದೇ ಇದ್ದದ್ದು ಒಟ್ಟು 113 ದಿವಸ. ನಾಲ್ಕು ವರ್ಷದಲ್ಲಿ ನಾಲ್ಕು ದೊಡ್ಡ ಏಕಾದಶಿ ಅಡಿಗೆ ಇಲ್ಲ ಹನ್ನೆರಡು ದಿವಸ ಒಂದು ಹೊತ್ತು ಅಡಿಗೆ ಆದಾಗ ಆರುದಿನ ರಜ. ತಿರುಪತಿಯಾತ್ರೆ ಹೋದಾಗ ಹತ್ತು ದಿನ ರಜ. ನೀನಾಗಿ ಕಾಯಿಲೆ ಬಿದ್ದದ್ದು, ಊರಿಗೆ ಹೋದದ್ದು, ಎಲ್ಲಾ 43 ದಿವಸ. ಒಟ್ಟು 300 ದಿವಸ ಮನೇಲಿ ನೀನು ಅಡಿಗೆ ಮಾಡಲಿಲ್ಲ. ಇದಕ್ಕಾಗಿ ಐವತ್ತು ರೂಪಾಯಿ ವಜಾ-ಆದರೆ 190 ರೂಪಾಯಿ ಉಳೀತು ಸಂಬಳದ ಬಾಕಿ. ಇದರನೋಟೆ ಹಾಲು ಚೆಲ್ಲಿದ್ದಕ್ಕೆ 13 ಆಣೆ 9 ಪೈ

ವಜ. ಚಿಮ್ಣಿ ಒಡೆದದ್ದು 3 ಆಣೆ 3 ಕಾಸು. ನಿನ್ನ ತಪ್ಪಿನಿಂದ ತಪ್ಪಲೆ ಕಳವಾದದ್ದು ರೂ. 3–6–0. ಒಟ್ಟು 4 ರೂ 6 ಆಣೆ. ನಿನ್ನ ಮಗನಿಗೆ ಬಟ್ಟೆ ಹೊಲಿಸಿದ್ದು ರೂ. 6–7–4. ಅವನಿಗೆ ಸ್ಕೂಲು ಫೀಸು 17–8–0.

ನಾಗು:—ಅಯ್ಯೋ ದೇವರೆ! ಭಟ್ಟರೆ! ಮುಗಿಯಿತೋ ಇನ್ನೂ ಇದೆಯೋ ಲೆಖ್ಖ?

ಗಂ:—ಘಾಬರಿಪಡಬೇಡ ನಾಗು! ಲೆಕ್ಕಕ್ಕೆ ಪಕ್ಷಪಾತವಿಲ್ಲ ನಾನೇನು ಸುಳ್ಳು ಲೆಖ್ಖ ಬರೆದಿದ್ದೇನೆಯೇ? ನೋಡು, ಆ ದಿವಸ ಆ ಭಿಕ್ಷುಕನಿಗೆ ಒಂದು ಕಾಸು ಕೊಟ್ಟೆನಲ್ಲಾ ಅದೂ ಬರೆದಿಟ್ಟಿದ್ದೇನೆ ಲೆಕ್ಕದಲ್ಲಿ. ಅಂದಮೇಲೆ....

ನಾಗು:—ನನಗೆಷ್ಟು ಬರಬೇಕೋ ಅದನ್ನಾದರೂ ಒಂದು ಕಾಗದದಲ್ಲಿ ಗುರುತು ಹಾಕಿಕೊಟ್ಟುಬಿಡಿ ಅಂದ್ರೆ. ಅದನ್ನಾದ್ರೂ ನೋಡಿ ಸಂತೋಷಪಟ್ಟು ಬಿಡ್ತೇನೆ.

ಗಂ:—ಗುರುತು ಹಾಕಿಟ್ಟಿದ್ದೇನೆ, ನೋಡು. (ಎಂದು ಒಂದು ಚೀಟಿಯನ್ನು ತೋರಿಸುವನು).

**ನಾಗು ಲೆಕ್ಕ :—**

| | ಜಮಾ. | | | ಖರ್ಚು | | |
|---|---|---|---|---|---|---|
| | ರೂ. | ಆ. | ಪೈ. | ರೂ. | ಆ. | ಪೈ. |
| ನಿನ್ನ ಅಸುಲು (ನಗದು ಬಂದದ್ದು) | ೫೦೦ | ೦ | ೦ | | | |
| ಬಡ್ಡಿ-(೪ ವರ್ಷಕ್ಕೆ) | ೧೮೦ | ೦ | ೦ | | | |
| ನಿನಗೆ ನಗದಾಗಿ ಕೊಟ್ಟಿರುವುದು. | | | | ೯೭ | ೦ | ೨ |
| ೪ ವರ್ಷಕ್ಕೆ ಸಂಬಳ ತಿಂಗಳಿಗೆ ೫ ರೂ. ನಂತೆ. | ೨೪೦ | ೦ | ೦ | | | |
| ೩೦೦ ದಿನ ಅಡಿಗೆ ಮಾಡದೇ ಇದ್ದದಕ್ಕೆ ವಜಾ | | | | ೫೦ | ೦ | ೦ |
| ಹಾಲಿನ ಖರ್ಚು (ಚೆಲ್ಲಿ ಹೋದದ್ದು) | | | | ೦ | ೧೩ | ೯ |
| ಚಿಮ್ಮಣಿ (ನೀನು ಒಡೆದದ್ದು) | | | | ೦ | ೩ | ೩ |
| ತಪ್ಪಲೆ ಕಳವಾದದ್ದು (ನಿನ್ನ ತಪ್ಪಿನಿಂದ) | | | | ೩ | ೬ | ೦ |
| ನಿನ್ನ ಮಗನಿಗೆ ಬಟ್ಟೆ ಹೊಲಿಸಿದ್ದು | | | | ೬ | ೭ | ೪ |
| ,, ಸ್ಕೂಲು ಫೀಸು | | | | ೧೭ | ೮ | ೦ |
| ಒಟ್ಟು ರೂ- | ೯೨೦–೦–೦. | | | ೧೭೫–೬–೪ | | |

ನಿನಗೆ ಬಾಕಿ ಸೇರಬೇಕಾದದ್ದು ರೂ. ೭೪೪–೯–೮.
ತಿಳೀತೇ ನಾಗೂ?

ನಾಗೂ:—ತಿಳೀತೂಂದ್ರೆ. ಸ್ಪಷ್ಟವಾಗಿ ತಿಳೀತು. ಹೋಗಲಿ ಕೊಟ್ಟುಬಿಡಿ ಅತ್ತಲಾಗೆ, ತೊಲಗಿ ಹೋಗ್ತೇನೆ. ಆಮೇಲೆ ನಿಮಗೆ ಲೆಕ್ಕ ಬರಿಯೋ ರಗಳೇನೇ ಇರೋದಿಲ್ಲ.

ಗಂ:—ನಿನಗಾಗಿ ಬರೀತೀನೇನು ಲೆಕ್ಕ ಹಾಗಾದ್ರೆ? ನಾಳೆ ದೇವರಿಗೆ ಒಪ್ಪಿಸ ಬೇಡವೆ ನಾಗು ಲೆಕ್ಕಾನ? ಗಂಗಾಧರ! ನಿನಗೆಷ್ಟು ಹಣ ಬಂತು. ಹೇಗೆ ಖರ್ಚು ಮಾಡಿದೆ? ನಿನ್ನ ಲೆಕ್ಕ ತೋರಿಸು ಅಂತ ದೇವರ ಅಪ್ಪಣೆಯಾದ್ರೆ ಏನು ತೋರಿಸಲಿ-ನಾನು? ಇಷ್ಟು ಕ್ಲಿಪ್ತವಾಗಿ ನಾನು ಲೆಕ್ಕ ಬರೆದಿಟ್ಟಿರೋ ಹೊತ್ತಿಗೇ ಯಾರಿಗೂ ನನ್ನೊಡನೆ ಮಾತನಾಡೋಕೇ ಧೈರ್ಯ ಇಲ್ಲ, ನೋಡು.

ನಾಗು:—ಸರಿ, ಸರಿ, ಅದು ಹೋಗಲಿ. ಒಪ್ಪಬೇಕಾದ್ದೇ. ನನ್ನ ಹಣಕ್ಕೆ ಏನು ಹೇಳ್ತೀರಿ?

ಗಂ:—ಮದುವೆಯೆಲ್ಲಾ ಮುಗೀಲಿ ನಾಗು. ನಿನ್ನ ಲೆಖ್ಖ ಫೈಸಲ್‌ಮಾಡ್ತೀನಿ.

ನಾಗು:—ಹಾಗಾದ್ರೂ ಮಾಡೀಂದ್ರೆ. ಬೇಜಾರುಪಟ್ಟುಕೋಬೇಡಿ. ನಾನೂ ಬಡವಳು. ಗತಿ ಇಲ್ಲದವಳು. ನನ್ನನ್ನು ಮಟ್ಟಿಗೆ ಮೋಸಮಾಡಬೇಡಿ. (ಹೋಗುವಳು).

ಮುದ್ದ:—(ಪ್ರವೇಶಿಸಿ ಗಂಗಾಧರನನ್ನು ನೋಡಿ) ಸಂಗಾಪ್ಪಾವ್ರು ಬಂದವ್ರೆ ಬುದ್ಧಿ!

ಗಂ:—ಬರಹೇಳು.

ಮುದ್ದ:—(ಸಂಗಪ್ಪನನ್ನು ಕರೆದುಕೊಂಡು ಬಂದು) ಇಗ್ನೊಳ್ಳಿ ಬುದ್ಧಿ! ನಾನೇನೋ ಏಳೋದ್ನೆಲ್ಲಾ ಏಳ್ದೆ. ಇನ್ನೂ ವಾಯ್ದೆ ಮಡಗ್ತಾ ಅವ್ರೆ. ನಿಮ್ಮತಾಕೆ ಬಂದು ಮಾತಾಡಕೊಳ್ಳಿ ಅಂತ ಕರತಂದೀವ್ನಿ. ಅದೇನು ಕೇಳಿ ಬುದ್ಧಿ!

ಗಂ:—ಸಂಗಪ್ಪ! ಏನಯ್ಯಾ ಇದು? ಅಲ್ಲ, ಆದರೂ ಮನುಷ್ಯನಿಗೆ ಮಾನದ ಮೇಲೆ ಜ್ಞಾನ ಇರಬೇಕು. ದುಡ್ಡು ನಿಮ್ಮ ದೊಡ್ಡಪ್ಪನ ಮನೇದೇ? ನನಗೇನು ಬಿಟ್ಟೆ ಬರುತ್ತೆಯೇ? ಅಲ್ಲ, ಮಗನ ಮದುವೆ ಬೇರೆ ಬೆಳಗಾ

ದರೆ ! ಎರಡುಸಾವಿರ ರೂಪಾಯಿ ಕರ್ಚಿಗೆ ದಾರಿ ಬಂದ್ಬಿಟ್ಟಿದೆ. ಬಡಿ ಹಣಾನೂ ಕಳಿಸ್ಲಿದ್ರೆ ಇದೇನೂಂತ ಅರ್ಥ ? ಆಳ್‌ಬಂದು ಕೇಳಿದ್ರೆ ಮನೇಲ್ಲಿದ್ಕೊಂಡೂ ಇಲ್ಲಾಂತೀಯಂತೆ. ಇದೆಲ್ಲಾ ಏನು ಅಕ್ರಮಾಂತ?

ಸಂಗಪ್ಪ:— ಭಟ್ಟರೇ, ಕೋಪ ಮಾಡಬೇಡಿ. ಏನೋ ಸಾಧ್ಯವಾಗಲಿಲ್ಲ.

ಗಂ:—ಕೋಪ ಏನಂಯ್ಯ ? ಯಾರಮೇಲೆ ಕೋಪ ಸಂಗಪ್ಪ ? ನನ್ನ ಅಸಲು ಬಡ್ಡಿ ಎಲ್ಲಾ ಬಿಸಾಕು. ನಿನ್ನೊಂದಿಗೆ ಯಾವ ಮುಟ್ಠಾಳ ಮಾತಾಡ್ತಾನೆ ಆಮೇಲೆ? ಕೋಪವಂತೆ ಕೋಪ !

ಸಂ:—ಹಾಗೂ ಆಗಲಿ ಸ್ವಲ್ಪ ತಡೀರಿ ಸ್ವಾಮಿ ! ಮನೇಲಿ ಕಷ್ಟ. ಅಂಗಡೀ ಬಾಕೀ ವಸೂಲಾಗಲಿಲ್ಲ

ಗಂ:—ಸಾಕು ಸಂಗಪ್ಪ ! ನಿನ್ನ ಕಷ್ಟ ಸಾವಿರ ಇರಬಹುದು. ಅದ್ನೆಲ್ಲಾ ಕಟ್ಕೊಂಡು ನಾನು ಸಾಯಲೇ ? ನನ್ನ ಹಣ ನನಿಗೆ ತಂದು ಕೊಟ್ಟು ಬಿಡು. ಹೆಚ್ಚಿನ ಮಾತು ಅನಾವಶ್ಯ.

ಸಂ:—ಮನೇಲ್ಲಿ ಎಲ್ಲರೂ ಕಾಯಿಲೆಸ್ವಾಮಿ ! ಮನೆಬಿಟ್ಟು ಕದಲೋಕ್ ಆಗಲಿಲ್ಲ

ಗಂ:— ನಿನ್ನ ಸಬೂಬು ನೀನ್ ಹೇಳ್ತಾ ಇರು. ನಾನೂ ಕೇಳ್ಕೊಂಡು ತೂಕಡಿಸ್ತಾ ಇರ್ತೀನೆ.

ಸಂ:—ಸಬೂಬಲ್ಲ ಸ್ವಾಮಿ ! ಹೆಂಡತಿ ಸಾಯೋಹಾಗಾಗಿದ್ದಾಳೆ. ನೀವೇ ಬಂದು ನೋಡಿ ಬೇಕಾದ್ರೆ.

ಗಂ:—ಸತ್ರೆಸಾಯಲಿ ಸಂಗಪ್ಪ ! ದಿನಾ ಸಾಯೋವರಿಗೆ ಅಳೋರು ಯಾರು ?

ಸಂ: – ಸ್ವಲ್ಪ ಸುಧಾರಿಸಿ ಸ್ವಾಮಿ ! ಶಾಂತದಿಂದ ಮಾತಾಡಿಸ್ವಾಮೀ ! ಹೇಗೂ ಸಿಗಹಾಕ್ಕೊಂಡೆ ಕಾಲದಲ್ಲಿ-ಒಂದು ತಿಂಗಳುಕಾಲ ಸುಧಾರಿಸಿ ಸ್ವಾಮಿ ! ಯಾವುದಾದ್ರೂ, ಜೊತೆಮಾಡಿ ಕೊಡ್ತೀನೆ.

ಗಂ:— ಒಂದು ನಿಮಿಷ ಸಾಧ್ಯವಿಲ್ಲ ಸಂಗಪ್ಪ ! ಊಹುಂ ! ಸಾಧ್ಯವೇ ಇಲ್ಲ. ಇದ್ದ ದುಡ್ಡೆಲ್ಲಾನೂವೆ ಕೆಲಸಕ್ಕೆ ಬಾರದವರ ಹತ್ತಿರ ಚೆಲ್ಲಿಬಿಟ್ಟು ಸಮಯಕ್ಕೆ ಒದಗದೆ ನಾನೂ ಸಾಯ್ತಾ ಇದ್ದೇನೆ. ಇದರಲ್ಲಿ ವಯಸ್ಸು

ಬಂದ ಮಗ ಜೇರೆ. "ಹೀಗೆಲ್ಲಾ ಸಿಕ್ಕಾಪಟ್ಟೆ ಸಾಲಗಳು ಕೊಟ್ಟು ಬಿಟ್ಟು ನನ್ನ ಕೈಯ್ಯಲ್ಲಿ ನೀನು ಕೊನೇಲಿ ಕೊಡೋದು ಕರಟಾನೇ" ಅಂತ ಹೀಯ್ಯಾಳಿಸ್ತಾ ಇದ್ದಾನೆ. ನೋಡು, ಮೊಸರಿನವಳು, ಹಾಲಿನ ವನು, ಕಟ್ಟಿಗೇವ್ನು, ಬಂದಬಂದ್ ಅರಚ್ತಾ ಇಸ್ತಾರೆ ಮನೇ ಬಾಗಿಲಲ್ಲಿ. ದಿನ ಬೆಳಗಾದ್ರೆ ಹತ್ತು ರೂಪಾಯಿ ಕರ್ಚು ನನಿಗೆ. ಬಿಲ್‌ಕುಲ್ ಆಗೋದಿಲ್ಲ ಸಂಗಪ್ಪ. ನನ್ನ ಹಣ ಇಟ್ಟು ಮಾತಾಡು.

ಸಂ:—ಹೀಗಾದ್ರೆ ಹ್ಯಾಗೆ ಸ್ವಾಮಿ ?

ಗಂ:—ಎಲ್ಲಾದ್ರೂ ಹೋಗಿ ಕಣೀಕೇಳಯ್ಯಾ! ಹೆಂಡತಿ ನಗೆನಟ್ಟು ಮಾರಿ ತಂದು ಬಿಸಾಕು.

ಸಂ:—ಏನಾದ್ರೂ ಆಗ್ಲಿ. ಇನ್ನೊಂದು ತಿಂಗಳು ಸುಧಾರಿಸಿ ಸ್ವಾಮಿ ! ನಿಮ್ಮ ಕಾಲಿಗೆ ಬೀಳ್ತೀನಿ.

ಗಂ:—ಸಾಧ್ಯವಿಲ್ಲ. ಸಾಧ್ಯವಿಲ್ಲ. ಸಾಧ್ಯವೇ ಇಲ್ಲ. ದಾವಾ ಹೊಡ್ತೀನಿ. ಡಿಕ್ರಿ ಪಡೀತೀನಿ. ಜಫ್ತಿ ವಾರಂಟು ತರ್ತೀನಿ. ಆಮೇಲೆ ನನ್ನನ್ನ ನಿಷ್ಠೂರ ಮಾಡಬೇಡ. ನಾನೂ ತಡೆಯೋವರೆಗೂ ತಡೆದೆ. ಇನ್ನು ನನ್ನಿಂದ ಸಾಧ್ಯವಿಲ್ಲ. ನಿಮಗೆಲ್ಲಾ ಹುಡುಗಾಟವಾಗಿ ಹೋಗಿದೆ ಹಣಾಂದ್ರೆ !

ಸಂ:—ಇದೇನುಸ್ವಾಮಿ ಹಾಗಾದ್ರೆ ?

ಗಂ:—ಸರಿ ಹೊರಡು ಸಂಗಪ್ಪ—ನನಗೆ ಹೊತ್ತಾಯಿತು. ಮದುವೇ ಮನೆಗೆ ಹೋಗಬೇಕು (ಹೊರಡುವನು).

ಸಂ:—ಸ್ವಾಮಿ! ಭಟ್ಟರೆ ! ಸ್ವಲ್ಪ ತಡೀರೀಂದ್ರೆ. (ಸ್ವಗತ) ಹೂಂ ! ಆಯ್ತು ನನ್ನ ಬಾಳು !

ದೃಶ್ಯ ೬] [ಸ್ಥಾನ: ಬೀದಿ.

(ಪಾತ್ರ ಸಂಗಪ್ಪ)

ಸಂಗಪ್ಪ:—(ಸ್ವಗತ) ಗಂಗಾಧರಭಟ್ಟ ! ಇರಲಿ. ಮನೆಯಲ್ಲಿ ಹೆಂಡತಿ ಮಕ್ಕಳು ಸಾಯ್ತಾ ಇದ್ದಾರೆ ಅಂದ್ರೆ "ಸಾಯಲಿ, ಸತ್ರೆ ಅಳೋವರು ಯಾರೂ ?"

ಅಂದೆ. ಜಿಪುಣ ಗಂಗಾಧರ! ನಿನ್ನಿಂದ ನಾನು ಸಾಲ ಪಡೆದೆ. ಅಹುದು. ಆದರೆ ನಾನು ಕೊಡೋದಿಲ್ಲ ಅಂತ ಹೇಳಿದನೇ? ಈಗ ಅಸಂದರ್ಭ; ಒಂದು ತಿಂಗಳು ಸುಧಾರಿಸೂಂದೆ. "ಸಾಧ್ಯವಿಲ್ಲ, ಸಾಧ್ಯವಿಲ್ಲ, ಸಾಧ್ಯವೇ ಇಲ್ಲ!" ಈ ಮುದುಕನ ಬಾಯಲ್ಲಿ ಯಾವಾಗ ನೋಡ್ಲಿ ಅದೇ ಮಾತು. ಬಹು ಕಠಿಣ! ಬಹು ಕ್ರೂರ! ಎಲ್ಲರನ್ನೂ ಹುರಿದು ಬಾಯಲ್ಲಿ ಹಾಕೋತೀನಿ ಅಂತಾನೆ. ದಾವಾಂತೆ! ಡಿಕ್ರಿಯಂತೆ! ಜಫ್ತಿಯಂತೆ ವಾರಂಟಂತೆ! ಅವಮಾನವಂತೆ! ಆಗಬಾರದು: ಅಧಮ ಗಂಗಾಧರ! ದುಡ್ಡು! ದುಡ್ಡು!! ದುಡ್ಡು!!! ದುಡ್ಡಿನಮೇಲಿಗೆ ನಿನ್ನ ಪ್ರಾಣವೆಲ್ಲಾ! ಎಷ್ಟು ದುಡ್ಡು ಬಂಗ್ರೂ ಸಾಲ್ದು ನಿನಗೆ, ಇಲ್ಲ, ಇಲ್ಲ, ಅಂತಾನೇ ಬಡಕೋತಾ ಇರ್ತೀಯ ಯಾವಾಗ ನೋಡಿದ್ರೂ. ನಿನ್ನ ಕಾಟ ನೋಡಿದ್ರೆ ಅಷ್ಟಿಷ್ಟಲ್ಲ. ಸಂಗಪ್ಪನಿಗೆ ಸಾಲ ಕೊಟ್ಟೆ. ಸರಿಯಿಲ್ಲ! ಆದರೆ ಸಂಗಪ್ಪನ ಮನೆಯವರನ್ನ, ಸಂಗಪ್ಪನ ಅಂಗಡೀನ್ನ, ಸಂಗಪ್ಪನ ತೋಟಾ ತುಡಿಕೆನ್ನ, ಸಂಗಪ್ಪನಮಾನಾನ್ನ, ಎಲ್ಲಾನ್ನೂವೆ ನೀನುಕೊಂಡುಕೊಂಡು ಬಿಟ್ಟಿದ್ದೀಯ ಅಲ್ಲವೆ? ನೀಹೇಳೋದುನೋಡಿದ್ರೆ ಹಾಗೇ ಇದೆ. ನಿನ್ನವರಾತು ಬಹಳ ಮಿಂಚಿ ಹೋಯಿತೋ! ಜಪ್ತಿಣಮುಂದೇದೇ! ಹೂಂ! ಇವನ್ನ ನಂಬಕೂಡ್ದು. ಹಣವೆಂದರೆ ಏನುಮಾಡೋದಕ್ಕೂ ಸಿದ್ಧ! ಕಿರಾತಕ! ಕಟುಕ! ನಿನ್ನಕಾರ್ಪಣ್ಯಕ್ಕೆ ಬೆಂಕಿಹಾಕಿದ್ರು. ಹೂಂ! ಏನೋ ಒದರಿದಾಂತ ಸುಮ್ಮನೆ ಅಸಡ್ಡೆ ಮಾಡಬಾರದು. ಇವನ ಹತ್ತಿರದಾಸಾಂದ್ರೆ ದಾವಾನೆ! ಜಫ್ತೀಂದ್ರೆ ಜಫ್ತೀನೇ! ಮರು ಮಾತೇ ಇಲ್ಲ. ನಿರ್ದಾಕ್ಷಿಣ್ಯ! ಎಚ್ಚರಿಕೆಯಿಂದಿರಬೇಕು. ಇಲ್ಲದಿದ್ರೆ ಬೋರಗಳೆ. ಮಾನಕಳಿತೀನೆ ಅಂದ. ಹೂಂ! ಕಳಿಯೋವನೇ. ಯಾವುದಕ್ಕೂ ಹೇಸೋದಿಲ್ಲ. ಆ ಮೇಲೆ ಮನೇಲಿರೋ ತಪ್ಪಲೆ, ಚೊಂಬು, ಎಲ್ಲಾ ಎಳೆದು ಬೀದೀಲಿ ಹಾಕಿಸಿಬಿಡ್ತಾನೆ-ಹಿಂದೆ ಮುಂದೆ ಇವನು ಮಾಡಿದ್ದೆಲ್ಲಾ ಷುಕ್ಯೇನು?

ಮೂರನೇ ವರ್ಷದಲ್ಲಿ ಇವನ ಸ್ವಂತ ಬಂಧು, ಆಗುಂಡೂರಾಯ! ಅವನಿಗೆ ಸಾಲಾತಕ್ಕೋಂತ ಪ್ರೋತ್ಸಾಹಮಾಡಿ, ಅವನ ಜಮೀನು

ಗಿಮೀನೆಲ್ಲಾ ಆಧಾರಮಾಡಿಕೊಂಡ. ಅವನಮನೇಲಿ ಮದುವೇಮುಂಜಿ ಎಲ್ಲಾ ನಡೆಸು ಸ್ವಲ್ಪಕಷ್ಟದಲ್ಲಿ ಸಿಕ್ ಹಾಕ್ಕೊಂಡಿರೋವೇಳೇಲ್ಲಿ ತಗಾಪೆ ಮಾಡ್ದ ಗುಂಡೂರಾಯುನ್ನ. ಯಥಾಪ್ರಕಾರವಾಯಿದೆ ಕೇಳಿದ ಗುಂಡೂರಾಯು. ನನಗೆ ಹೇಳಿದ ಹಾಗೆಯೇ ಬಿಲ್‌ಕುಲ್ ಆಗೋಲ್ಲಾಂವ ಮುದುಕ ದಾವಾ ಹೂಡಿದ. ಡಿಕ್ರಿ ಆಯಿತು. ಜಫ್ತಿಯೂ ಆಯಿತು. ಗುಂಡೂರಾಯುನಿಗೆ ಮಾನವೂ ಹೋಯಿತು. ಅವನ್ನೊಂದು ಕಾಡಿದ, ಕಾಡಿದ, ಹಾಗೆಕಾಡಿದ. ಮಕ್ಕಳೊಂದಿಗ ಪಾಪ! ಆಗುಂಡೂರಾಯ! ಗೌರವಸ್ಥ! ಅಂಥಾವನಿಗೆ ಬರಬಾರದಗತಿ ಬಂತು ಈ ಮುದುಕನ ದೆಸೇಯಿಂದ. ಸರಿ, ಗುಂಡೂರಾಯು ಹೋಗಿ ಮರಕ್ಕೆ ನೇಣು ಹಾಕ್ಕೊಂಡು ಸತ್ತ. ಅವನ ಸಂಸಾರದ ಗೋಳುಕಿವೀಲ್ ಕೇಳೋಕ್ಕಾಗೋಲ್ಲ. ಆದರೇನು? ಇವನಿಗೇನಾದರೂ ಕನಿಕರ ಹುಟ್ಟಿತೇನು? ಉಹುಂ!

ಅಬ್ಬ, ಸ್ವಂತ ಬಂಧುವಿಗೆ ಹೀಗೆ ಮಾಡಿದ ಈ ಪಿಶಾಚಿ ಮುಂದೇದು ಇನ್ನು ನನ್ನನ್ನು ಬಿಡ್ತಾನೆಯೇ? ನಾನು ಕಾಲಹರಣ ಮಾಡತಾ ಇರಬಾರದು. ಇವನಿಗೊಂದು ಸರಿಯಾದಗತಿ ಕಾಣಿಸಿ ಬಿಡಬೇಕು. ಇಲ್ಲದಿದ್ದರೆ ಇವನು ಇರೋರ ಕೊರಳೆಲ್ಲಾ ಕತ್ತರಿಸಿ ಹಾಕಿಬಿಡ್ತಾನೆ ಏನುಮಾಡಲಿ? ಹಾಂ! ಏನುಮಾಡಲಿ? ಹಣವಂತೂ ತಕ್ಷಣ ದೊರೆಯುವುದಿಲ್ಲ. ಇಸಾಲ್‌ವೆನ್ಸಿ ಅರ್ಜಿ ಹಾಕಿಬಿಡಲೆ? ಛೇ! ಆಮೇಲೆ ಇವನಿಗೆ ಮಾಡಿದ ಶಿಕ್ಷೆಯೇನು? ಉಹುಂ! ಹಾಂ! ತಿಳೀತು ದಾವಾ ಮಾಡ್ಲಿ, ಡಿಕ್ರಿತಕ್ಕೊಳ್ಳಿ, ವಾರಂಟು ತರಲಿ, ಗಂಗಾಧರ! ಈಗ ಬಂತು- ಸರಿಯಾದದ್ದು ಒಂದು ಯೋಚನೆ ಬಂತು. ಗಂಗಾಧರ! ನೀನು ನೆಗೆದು ಬಿದ್ದೆ!

ದೃಶ್ಯ ೭ ] [ ಸ್ಥಾನ: ನರಹರಿಶಾಸ್ತ್ರಿಗಳ ಮನೆ

(ಪಾತ್ರಗಳು: ನರಹರಿಶಾಸ್ತ್ರಿ, ಗಂಗಾಧರಭಟ್ಟ, ವಧೂವರರು, ಪುರೋಹಿತರು, ಇತ್ಯಾದಿ)

[ವಿವಾಹ ಮಂಟಪ–ಮದುವೆಯ ಕೋಲಾಹಲ-ಧಾರಾನುಹೋತ್ಸವ ಸಮಯ]

ಗಂ:—ನರಹರಿಶಾಸ್ತ್ರಿಗಳೇ! ನರಹರಿಶಾಸ್ತ್ರಿಗಳೇ!

ನರ:—ಕರೆದರಾ ಸ್ವಾಮಿ? ಬಂದೆ, ಬಂದೆ, ತಾಳಿಕಟ್ಟುವ ಸಮಯ ನೋಡಿ·

ಗಂ:—ಹೌದೂಂದ್ರೆ ! ಅದಕ್ಕೇ ಕರೆದ್ದೆ, ಅದಕ್ಕೆ ಮುಂಚೆಯೇ ಸ್ವಲ್ಪ ಬನ್ನೀಂದೆ.

ನರ:—(ಬಂದು) ಏನುಸ್ವಾಮಿ ?

ಗಂ.—ಅಲ್ಲಾಂದ್ರೆ ! ತಾಲೀ ಕಟ್ಟೋದು ಸ್ವಲ್ಪ ತಡವಾದ್ರೆ ಆಗಲಿ. ಅದಷ್ಟು ಮುಖ್ಯವಲ್ಲ.

ನರ:—ಏನುಸ್ವಾಮಿ ! ಅಮಂಗಳ ಇದು ? ಬಹು ಚೆನ್ನಾಗಿದೆ. ನೋಡಿದವರು ನಗ್ತಾರೆ ನೋಡಿ. ಹೀಗೆಲ್ಲಾ ಮಾತನಾಡಿವರೆ !

ಗಂ:—ಅಲ್ಲ, ನರಹರಶಾಸ್ತ್ರಿಗಳೆ ! ಇದೇನು ನಿಮ್ಮ ಅಕೃತ್ಯ ? ಏನು ನಿಮ್ಮ ನಡೆವಳಿಕೆ ? ಏನು ನಿಮ್ಮ ಧೋರಣೆ ? ಅಲ್ಲಾಂದ್ರೆ, ಹುಡುಗನ್ನ ಹೆತ್ತು ಇಪ್ಪತ್ತೆರಡು ವರ್ಷ ಸಾಕಿ ಸಲಹಿ ಸುಮ್ಮನೆ ಕೊಟ್ಟುಬಿಟ್ಟನೆ ಹಾಗಾದರೆ ? ಇದೇನಕ್ರಮಾಂತ ?

ನರ:—ಸ್ವಾಮೀ ! ನೀವಾಡೋ ಮಾತೊಂದೂ ನನಗರ್ಥವಾಗೋದಿಲ್ಲ ನೋಡಿ.

ಗಂ:—ಹೇಗೆ ಅರ್ಥವಾಗುತ್ತೇ ಸ್ವಾಮಿ ? ಅರ್ಥಮಾಡಿಕೋಬಾರದೂಂತ ನಿರ್ಧರ ಮಾಡಿಕೊಂಡರೆ ?

ನರ:—ಅದೇನು ಸ್ವಲ್ಪ ತಿಳಿಯೋಹಾಗಾದ್ರು ಹೇಳಿ ಸ್ವಾಮಿ ! ಮುಹೂರ್ತಕ್ಕೆ ಕಾಲ ಮಿಂಚಿಹೋಗುತ್ತೆ.

ಗಂ:—ಮಿಂಚಿಹೋದ್ರೆ ಹೋಗಲಿಸ್ವಾಮಿ ! ಕೊನೇಗೆ ಮದುವೇನೇ ಬೇಡ ನೋಡಿ.

ನರ:—ಸ್ವಾಮಿ ! ಗಂಗಾಧರಭಟ್ಟರೆ ! ಅಪರೂಪಕ್ಕೆ ಒಂದು ಹೆಣ್ಣೂಂತ ಹೆತ್ತು–ಮದುವೆ ಮಾಡಿ ಸಂತೋಷಪಟ್ಟು ಬಿಡೋಣಾಂತ ನಾವು ಗಂಡ ಹೆಂಡಿರು ಕುತೂಹಲರಾಗಿದ್ದೆವು. ಈಗೆಲ್ಲಾ ತಣ್ಣಗಾಯಿತು ನೋಡಿ. ಇಂಥ ಅಶುಭ ಮಾತಾಡ್ತೀರೀಂತ ನಾನು ಎಣಿಸಿರಲಿಲ್ಲ ನೋಡಿ.

ಂ:—ಅಶುಭ ಎಂಥಾದ್ದು ಸ್ವಾಮಿ ? ಅಲ್ಲ. ಏನೋ ನರಹರಿಶಾಸ್ತ್ರಿಗಳು ಗೌರವಸ್ಥರು, ಒಳ್ಳೆಯವರು, ಆಡಿದಮಾತಿಗೆ ತಪ್ಪೋದಿಲ್ಲ, ಅಂತೆಲ್ಲಾ ನಾನು ಅಂದುಕೊಂಡಿದ್ದರೆ....

ನರ:—ಸ್ವಾಮಿ ! ಭಟ್ಟರೇ ! ದಯವಿಟ್ಟು ಮನ್ನಿಸಿ. ಏನಾದರೂ ತಿಳಿಯದೆ ತಪ್ಪು ಮಾಡಿದ್ದರೆ ಕ್ಷಮಿಸಿ. ಎಷ್ಟಾದರೂ ನಾವು ಹೆಣ್ಣು ಹೆತ್ತವರು; ತಗ್ಗಿ ಬಾಳಬೇಕು. ಅದಿರಲಿ. ನಿಮ್ಮ ಮಗನಿಗೆ ಹೆಣ್ಣು ಕೊಟ್ಟು ಮದುವೆ ಮಾಡಿದಾಕ್ಷಣಕ್ಕೆ, ನಮ್ಮ ಮರ್ಯಾದೆ, ಅಂತಸ್ತು, ಒಳ್ಳೆ ಯತನ, ಎಲ್ಲಾ ಕಳೆದುಹೋದುವೆ? ಅಲ್ಲದೆ, ಆಡಿದಮಾತು ಯಾವುದು. ಸ್ವಾಮಿ ! ನಾನು ತಪ್ಪಿದ್ದು ? ಅಲ್ಲ, ಇಷ್ಟು ಜನರೆದುರಿಗೆ ಸಿಕ್ಕಾಪಟ್ಟೆ ಮಾತನಾಡಿ, ಮಾನಾ ಕಳೀಬಾರದು ಸ್ವಾಮಿ ! ಇದು ಸ್ವಲ್ಪವೂ ಚೆನ್ನಾ ಗಿಲ್ಲ ನೋಡಿ. ನೀವೂ ಹೆಣ್ಣು ಹೆತ್ತವರು ಸ್ವಾಮಿ !

ಗಂ:--ಸಾಕು, ಸ್ವಾಮಿ ! ಸಾಕು. ಅಲ್ಲ, ನೀವು ಹೀಗೆಲ್ಲಾ ಮಾಡ್ತೀರೀಂತ ನಾನು ಕನಸಿನಲ್ಲಿಯೂ ಕಂಡಿರಲಿಲ್ಲ. ಹೋಗಲಿ ಬಿಡಿ. ತಪ್ಪು ನಂದು ಮೊದಲೇ ತಕ್ಕ ಬಂದೋಬಸ್ತು ಮಾಡಿಕೋಬೇಕಾಗಿತ್ತು. ಹೂಂ ! ನನ್ನ ಬುದ್ಧಿಗೂ ಬಂದುಬಿಟ್ಟಿದೆ ಏನೋ ಕೇಡುಗಾಲ ! (ಕೋಪದಿಂದ) ಲೋ, ಈಶ್ವರ ! ಎದ್ದುಬಾರೋ ಹಸೇಮಣೆಯಿಂದ ! ಇವರ ಮದುವೆ ನೋಡು ! ಮುಖನೋಡು ! ಎಷ್ಟು ದಿವ್ಯವಾಗಿದೆ ? ನಾವೂ ಏನೋ ಭಿಕಾರಿಗಳು ಅಂತ ಇವರ ಭಾವನೆ. ಹೇಗೆ ಮಾಡಿದ್ರೆ ಹಾಗೆಲ್ಲಾ ಬಾಯಿ ಮುಚ್ಚಿಕೊಂಡು ಮಾಡಿಸ್ಕೋತಾರೇಂತ. ಅಷ್ಟಲ್ಲದೇನು ? (ಗಂಗಾಧರನು ಹೊರಡುವನಂತೆ ನಟಿಸುವನು).

(ವಿವಾಹ ಮಂಟಪದಲ್ಲಿ ಕಲಕಲ ಪಿಸಪಿಸ ಮಾತುಗಳು)

ನರ:—ಸ್ವಾಮಿ ! ಇದೀಗ ಚೆನ್ನಾಯಿತು. ಈ ಸಂಬಂಧ ಮಾಡಬಾರದಾ ಗಿತ್ತು ನೋಡಿ. ಏನೋ ಬಂದೊದಗಿಬಿಡ್ತು. ಹೋದರೆ ಹೋಗ್ಲಿ. ಸ್ವಲ್ಪ ಶಾಂತ ತಂದ್ಕೊಳ್ಳಿ ಸ್ವಾಮಿ ! ಗಂಗಾಧರ ಭಟ್ಟರೆ ! ನಾನು ಆಡಿದ್ದು ಯಾವ ಮಾತು ಸ್ವಾಮಿ ! ತಪ್ಪಿದ್ದು ? ಯಾವುದು ಸ್ವಾಮಿ !

ಗಂ:—ಒಂದೇ, ಎರಡೇ ? ಸ್ವಾಮಿ! ಗಂಡಿನ ಕಡೇವರಿಗೆ ಧೋತ್ರ, ಸೀರೆ, ಎಲ್ಲಾ ತೆಕ್ಕೊಡ್ತೀನೀಂದ್ರಿ. ಅಥವಾ ಅವಕ್ಕೆ ಬದಲು ಹಣವಾದರೂ ಕೊಟ್ಟುಬಿಡ್ತೀನಿ ಅಂದ್ರಿ. ಎರಡು ಖರ್ಚೂ ನಮ್ಮದೇ ಇರಲೀಂದ್ರಿ! ಆದಕ್ಕೇನು ಅರ್ಥ ಸ್ವಾಮಿ ?

ನರ:—ಮದುವೆ ಆರಂಭವಲ್ಲೇ ಎಲ್ಲಾ ಮುಗಿದುಹೋಯಿತೇ ಭಟ್ಟರೇ ? ಮುಂದೆ ಹೋಗತಾ, ಹೋಗತಾ ಗೊತ್ತಾಗಲಾರದ ?

ಗಂ:—ಹೆಣ್ಣಿಗೆ ಚಿನ್ನದ ಡಾಬು ಹಾಕ್ತೀನಿ ಅಂದ್ರಿ ?

ನರ:—ಅಯ್ಯೋ ಪುಣ್ಯಾತ್ಮರೇ! ಇದಕ್ಕೇನೇ ಇಷ್ಟು ಕೂಗಾಟ ? ಡಾಬಿದೇ ಸ್ವಾಮಿ! ಡಾಬಿದೆ. ಕೂಗಾಡಬೇಡಿ. ಘಾಬರಿ ಪಟ್ಟುಕೋಬೇಡಿ. ಹುಡುಗಿ ಧಾರೆ ಸೀರೆ ಉಟ್ಟುಕೊಂಡಿದೆ. ಏನೋ ಸುತ್ತಳತೆ ಸಾಲದು. ಸ್ವಲ್ಪ ಸೊಂಟ ಹಿಡಿತ್ತೇಂತ ಹಾಕಲಿಲ್ಲ. ಅಷ್ಟೇ. ಲೇ! ಆ ಡಾಬು ತೋರಿಸೇ ಇವರಿಗೆ. (ಡಾಬನ್ನು ತೋರಿಸುವರು)

ಗಂ:—ಕೈಗೆ ಐದು ಬಳೆ ತೊಡಿಸ್ತೀನಿ ಅಂದ್ರಿ. ಮೂರೇ ಇದೆಯಲ್ಲಾ ಸ್ವಾಮಿ ?

ನರ:—ಒಟ್ಟು ಐದೇಕೆ ? ಆರೇ ಮಾಡಿಸಿದೆ ಸ್ವಾಮಿ! ಮದುವೆ ಅವಸರವಾಗಿ ನಡೀಬೇಕಾಗಿ ಬಂದದ್ದರಿಂದ ಸಮಯಕ್ಕೆ ಸರಿಯಾಗಿ ಎಲ್ಲಾ ಬರಲಿಲ್ಲ. ಅಷ್ಟೇ.

ಗಂ:—ಈ ವರ್ಷ ಹುಡುಗನ ಓದಿನ ಕರ್ಚಿಗೆ 800 ಕ್ಕೆ ಕಮ್ಮೀ ಆಗೋಲ್ಲ ಅಂದೆ. ಆಗಲಿ ಅಂದ್ರಿ. ಕೊಟ್ಟಿರೋದು ನೋಡಿದ್ರೆ ಐನೂರೇ! ಬಾಕೀಗೆ ಏನು ಹೇಳ್ತೀರಿ ಸ್ವಾಮಿ ?

ನರ:—ಸ್ವಾಮಿ! ಭಟ್ಟರೆ! ಕ್ಷಮಿಸಿ. ಇದ್ಯಾಕೋ ಎಲ್ಲಾ ಮಿತಿ ಮಿಂಚಿ ಹೋಯಿತು. ಇದು ಬಾಕಿ ವಸೂಲಿಕಾಲವೂ ಅಲ್ಲ; ನಾನು ನಿಮಗೆ ಕೊಡಬೇಕಾದದ್ದು ಬಾಕಿಯೂ ಅಲ್ಲ. ಬಹಳ ಲಕ್ಷಣವಾಯಿತು ಸ್ವಾಮಿ! ಏನೋ ಕೊಡ್ತೀನಿ ಅಂದದ್ದಕ್ಕೆ ಕೊಟ್ಟೆ. ಹಾಗಾದರೆ ಈ ವರ್ಷ ಆಗಲೇ ಮುಗಿದುಹೋಯಿತೆ ? ಅಥವಾ ಕೊಟ್ಟ ಐನೂರು

ಆಗಲೇ ಖರ್ಚಾಗಿ ಹೋಯಿತೇ? ನಡೀಲಿ ಸ್ವಾಮಿ! ಇನ್ನೂ ಮುನ್ನೂರು ತಾನೇ ಸ್ವಾಮಿ ! ಆ ಚಿಂತೆ ನಿಮಗ್ಯಾತಕ್ಕೆ ಸ್ವಾಮಿ ? ಹಾಗೂ ಹುಡುಗ ನಿಗೆ ಬೇಕೂಂದ್ರೆ ಮುನ್ನೂರೇ ಕೊಡಬೇಕೇನು ? ಐನೂರು ಕೊಟ್ರಾಗದೆ? ಸಾವಿರ ಕೊಟ್ರಾಗದೆ? ನಮ್ಮ ಪ್ರಿಯ, ವಿಶ್ವಾಸ, ನೋಡಿ. ಒಳ್ಳೆ ಮುಹೂರ್ತದಕಾಲದಲ್ಲಿ ಇದೆಲ್ಲಾ ಏನು ಚರ್ಚೆ ? ಸ್ವಾಮಿ ! ಆಭಾಸ ನೋಡಿ !

(ನೆರೆದಿದ್ದವರು)

ಸಾಕು ! ನರಹರಿಶಾಸ್ತ್ರಿಗಳೇ ! ನಿಮಗೂ ಬುದ್ಧಿ ಲೋಪವಾಗಿಹೋಗಿದೆ ನೋಡಿ, ಜನಗಳ ತಾರತಮ್ಯವನ್ನನುಸರಿಸಿ ಮಾತನಾಡಬೇಕು ಸ್ವಾಮಿ ! ಉಪ್ಪಿಲ್ಲ, ಹುಳಿಯಿಲ್ಲ. ಎಲ್ಲಾ ಕೆಲಸಕ್ಕೆ ಬಾರದ ತರ್ಕ. ಬಿಡಿ ಈ ಪ್ರಸ್ತಾಪವನ್ನ. ಇದು ಬೆಳೀತಾ ಇದ್ರೆ ಮುಂದೆ ಗತಿ ಕಾಣೋಹಾಗಿಲ್ಲ. ಹೂಂ ! ಪುರೋಹಿತರೆ ! ಜರುಗಲಿ, ಧಾರಾಮುಹೂರ್ತ ! ಕಾಲಾತೀತವಾದೀತು.

( ಗಂಗಾಧರಭಟ್ಟನನ್ನು ನೋಡಿ ) ಸ್ವಾಮಿ ! ಗಂಗಾಧರಭಟ್ಟರೆ ! ನಿಮಗೂ ವಯಸ್ಸಾದದ್ದಕ್ಕೆ ಬಹಳ ಸಾರ್ಥಕವಾಯಿತು ! ಅಲ್ಲ, ಇದೆಲ್ಲಾ ಏನು ತರ್ಕ ಅಂತ? ಸುಮ್ಮನೆ ಇರಿಸ್ವಾಮಿ ! ಸ್ವಲ್ಪವೂ ಚೆನ್ನಾಗಿಲ್ಲ. ನಗತಾರೆ ನೋಡಿದವರು. ಸ್ವಲ್ಪ ದಯವಿಟ್ಟು ಕೂತುಕೊಳ್ಳಿ ಸ್ವಾಮಿ! ಶಾಂತವಾಗಿ ಕೆಲಸ ಜರುಗಲಿ !

ಪುರೋಹಿತ:—ತದೇವ ಬಲಂ, ತಾರಾ ಬಲಂ, ಚಂದ್ರ ಬಲಂ ! ............

ದೃಶ್ಯ ೮ ] [ಸ್ಥಾನ : ಬೀದಿ

[ ಪಾತ್ರಗಳು : ಮುದ್ದ, ಪುರುಷೋತ್ತಮ್ ]

ಪುರು:—ಮುದ್ದ ! ಇದೇನೋ ಹೊಸ ಧೋತ್ರ ! ಇನಾಂ ಕೊಟ್ರೇನೋ ನಿಮ್ಮ ಜಮಾನ್ರು ?

ಮು:— ಬುದ್ಧಿ ! ಪುರುಸೋತ್ತಮಪ್ನೋರಾ ! ಇದೇನಾ ಬುದ್ಧಿ ! ನೀವೂ ಸುರು ಮಾಡ್ ಬುಟ್ಟಂಗದಲ್ಲಾ ಲೇವಡಿ ಮಾಡೋಕೆ ?

ಪುರು:— ಯಾಕೋ ಮುದ್ದ ? ಹಾಗಾದ್ರೆ ಕೊಡಲಿಲ್ವೆ ಯಜಮಾನ್ರು ಧೋತ್ರಾನಾ ?

// 1770

ಮು:—ಅದೇ ನೋಡಿ ಮತ್ತೆ! ನೀವ್ ಕಾಣ್ರೇನೋ ಪಾಪ! ಯಜಮಾನರ ದಾರಾಳಾವಾ! ದೋತ್ರ ಕೊಡ್ತಾರೆ ದೋತ್ರಾವಾ! ನಮ್ಮೊಪ್ಪ! ಈಸ್ವರಪ್ಪ, ಇಂದಾರೋ ಮುದ್ದ ಅಂತ ಕರದುಕೊಟ್ರು. ಅದನ್ನೊದ್ದು ಕೊಂಡು ಓಡೆ ನಿನ್ನೆ. ಯಜಮಾನರು ನೋಡು ಬುಟ್ಟದ್ದೇ ತಡ "ಎಲ್ಲೋ ಕಳ್ಳತನ ಮಾಡಿದೆ ಮುದ್ದ?" ಅಂತಂದ್ರು. ನಂಗ್ ಕೋಪ ಬತ್ತುನೋಡಿ. ಅಲ್ಲ ಬುದ್ಧಿ! ಇದೇನು ಬುದ್ಧಿ! ಎಂದೂ ಇಲ್ಲದೆ ಇವತ್ತಿಂಗನ್ತಿದ್ದೀರಾ? ಕಳ್ಳತನಾಂತ! ಅಂತೇ ಚಾಳೀ ಗೋಳು ನನ್ತಾವ ಕೇಳ್‌ಬೇಡೀ ಬುದ್ಧಿ! ಬೇಕಾದ್ರೆ ಕೇಳಿ ಈಸ್ಕೋ ತೀನಿ. ನಿಮ್ಪಾದ! ಈಗ ಅನುಬೇವ್ಸೋ ಬಡತನಾನೇ ಸಾಲ್ದಾ? ಇದರಾಗ್ ಕಳ್‌ತನಾ ಬೇರೇ ಮಾಡಬೇಕಾ? ಬರೋವಾಗ್ತರ್‌ನಿಲ್ಲಾ ಓಗೋವಾಗ ಕೊಂಡೋಗೋದಿಲ್ಲಾ ಅಂತಂದೆ. ಅಂಗಾದ್ರೆ ಎಲ್ಲೀದೋ ನೀನೊದ್ಕೊಂಡಿರೋ ದೋತ್ರ? ಅಂತಂದ್ರು. ಅದಕಿದ್ಕೊಂಡು ನಿಮ್ ಮಗಾವ್ರು ಕೊಟ್ರು ಬುದ್ಧಿ! ಮದುವೆ ಇನಾಮೂಂತ! ಅಂತಂದೆ. ಅದ್ಕಂದ್ರು "ಈ ಮುಂಡೇದು ಈಸ್ವರಪ್ಪ ಸುಮ್ಕೆ ಕಾಲೇಜಾಗೋದೋ ದಷ್ಟೆ. ಬುದ್ದೀ ಅನ್ನೋದು ಒಸೀನಾರ ಇಲ್ಲ. ಏನೋ ಬೋ ಸಂಪಾ ರಿಸಿ ಗುಡ್ಡೆ ಆಕ್‌ಬುಟ್ಟಂಗೆ! ಇದ್‌ಬದ್ದದ್ದನ್ನೆಲ್ಲಾ ಎತ್‌ಕೊಟ್ ಬುಡ್ತಾನೆ ಸಿಕ್ ಸಿಕ್ಕಿದವರ್ಗೇ. ಕಟ್ಟೆ ಸುಕಾ ಅನ್ನೋದು ಏನಾರಾ ತಿಳೀತೈತಾ ಅವನಿಗೇ?" ಅಂದ್ರು.

ಈಸ್ವರಪ್ಪನೋರು ಬಂದ್ರು ಅಟ್ರಾಗೇ. "ಸುಮ್‌ಕಿರು ಅಪ್ಪಾ! ಬೋಕಾಲದಿಂದ ಅವ್ನೆ ಮುದ್ದ ನಮ್ ಮನೆಯಾಗೆ! ಮದುವೇಲಿ ಬಂದದ್ದು-ಒಂದು ಜರೀದೋತ್ರ ಅವನಿಗೆ ಕೊಟ್ಟೇವ್ನಿ. ಏನೋ ಪಾಪ! ಕಾಲದಿಂದ ನನ್ನೂ ಎಗಲಮೇಲೆ ಒತ್ತು ಸಾಕವ್ನೆ. ಅವನಿಗೊಂದು ದೋತ್ರ ಕೂಡಾ ಕೊಡೋಕಾಗ್ದಾ? ಇದಿಕ್ಯಾಕಿಟ್ಟು ಕೂಗಾಟ! ನೋಡಿದೋವ್ರು ನಗ್ತಾರೆ." ಅಂದ್ರು. ಎಜಮಾನ್ರು "ಲೋ ಈಸ್ವರ? ನಿಮಗೆಲ್ಲಾ ಏಳೋವ್ರು ಕೇಳೋವ್ರು ಯಾರೂ ಇಲ್ಲಾ ಕಾಣೋ!

ಇಂಗೆಲ್ಲಾ ಮಾಡಿದ್ರೆ ಮನೆ ಸೊಕ್ಕಟ ಆಗೋಗ್‌ತ್ತೈತೆ'' ಅಂತೆಲ್ಲಾ ಕೂಗಾಡಿಬುಟ್ರು. ಬುದ್ಧಿ! ಪುರುಸೋತ್ತಮಪ್ನೋರಾ! ನನಗಂಕಾ ಓಟೊಂದು ಬೇಜಾರು ಬಂದುಬುಟ್ಟೈತೆ ನೋಡಿ. ಒಂದೊಂದುಸಲ ಅನ್ನಿಸ್ತೈತೆ. ಆಳು ಮುದುಕನ ಕತ್ತು ಕಿವಿಸಿ ಒಳೇಲ್ ಆಕಬುಡ್ಲಾಂತ!

ಪುರು:—ಮುದ್ದ! ಈಶ್ವರನ ಮದುವೇಲಿ ಧಾರೆ ಸಮಯದಲ್ಲಿ "ಎದ್ದು ಬಾರೋ ಈಶ್ವರ! ಮದುವೆ ಬೇಡ! ಹಣಾನೆಲ್ಲಾ ಮಾತಿನಂತೆ ಕೊಟ್ರೆ ಕೊಡ್ಲಿ. ಇಲ್ಲದಿದ್ದರೆ ಅವರ ಹೆಣ್ಣು ಅವರ ಮನೇಲೇ ಇರಲಿ ನಡಿಯೋ'' ಅಂದ. ಬಂದಿದ್ದವರೆಲ್ಲಾ ಬಹು ಬೇಜಾರುಪಟ್ಕೊಂಡ್ರು ನೋಡು. ಹಾಗೂ ಹೆಣ್ಣಿನಕಡೆಯವರನ್ನ ಒಂದು ಗೋಳಾಡಿಸಿದ- ಹಾಗೆ ಗೋಳಾಡಿಸಿದ ನೋಡು. ನಾಗವಲ್ಲಿ ದಿವಸ ಅಂತೂ ನರಹರಿಶಾಸ್ತ್ರಿಗಳು "ಹೋಗಿ ಹೋಗಿ ಈ ಸಂಬಂಧ ಬಳಸಿಕೊಟ್ಟೆಯಲ್ಲೋ ದೇವರೆ! ಸಾಕಪ್ಪಾ ಸಾಕು. ಹೆಣ್ಣನ್ನು ತಕ್ಕೊಂಡು ಹೋಗಿ ಎಲ್ಲಿಯಾದ್ರೂ ಬಾವೀಲ್ಲಿ ತಳ್ಳಿಬಿಡಲೇ?'' ಅಂತ ಅತ್ತುಬಿಟ್ರು ಪಾಪ.

ಮು:—ಬೋ ದುರಾಸೆ! ಬೋ ದುರಾಸೆ! ಬುದ್ಧಿ! ಬಾಗಿನ ತಂದು ಮಡಗಿದ್ರೆ ಸರಿ. ಬೀಗರು ಇಟ್ಕೊಬುಟ್ಟು ಅವರಿನ್ನೂ ಎದ್ದೋಗೋಕಿಲ್ಲ. ಆಗಲೇ "ಎತ್ತಿ ಮಡಗೋ ಮುದ್ದ! ಎಲ್ಲಾ ನನ್ನ ರೂಮಾಗೆ'' ಅನ್ನೋದು. ತಿಂಡಿ ಪಂಡಿ ತಂದು ಮಡಗಿದ್ರೆ ಸರಿ "ನಾಗೂ! ಎಲ್ಲಾ ಭದ್ರವಾಗಿ ಎತ್ತಿ ಮಡಗು. ಈಗ ಯಾರಿಗೂ ಕೊಡೋದು ಬೇಡ. ಅಂಗೂ ಬೇಕಾದ್ರೆ ಓಗಿ ಮದುವೇ ಮನೇಲೆ ತಿಂದ್ಕೊಳ್ಳಿ. ಮದುವೇಲ್ಲಾ ಮುಗಿದಮೇಕ್ಕೆ ತಿನ್ನಾನಾ ಇದೆಲ್ಲಾ'' ಅಂತ. "ನಾವು ಎಚ್ಚುವರಿ ಜನಗೋಳಿಗೆ ಕಾಪಿ ಇಲ್ಲೇ ಕಾಯಿಸ್ಕೋತೀವಿ, ಪುಡಿ, ಸಕ್ಕರೆ, ಎಲ್ಲಾ ಕಳಿಸಿ,'' ಅನ್ನೋದು. ಬೀಗರಕಡೇವ್ರು ಪುಡೀ, ಸಕ್ರೇ, ಎಲ್ಲಾ ತಂದು ಮಡಗಿದ್ರೆ "ಎಲ್ಲಾ ಕೊಂಡೋಗಿ ಭದ್ರವಾಗಿ ಮನೆಯಾಗೆ ಮಡಗ್ಬುಟ್ಟು ಬಾರೋ ಮುದ್ದ'' ಅಂತನ್ನೋದು. ಅಂತೂ ಒಂದಾರು ತಿಂಗಳು ವರ್ಸಕ್ಕಾಗೋಟ್ಟು ಸೇರುಸ್‌ಬುಟ್ಟಿಪ್ರೆ ನಾನೂನ! ಬುದ್ಧಿ!

ಇಂತೇಲ್ರಿಗೆ ಬೇಡಾಬೇಡಾಂತಂದ್ರೂ ಬಂದ್‌ಸೇರ್‌ತೈತೆ ನೋಡಿ. ಇನ್ನೊಂದು ಸಲ ಅಂದ್ರು ಬೀಗರಿಗೆ "ನೀವು ಸಾಮಾನ್‌ಗೀಮಾನ್ ತಂದು ಮಡಗೋದು ಬೇಡ. ಅದಕ್‌ಬದುಲು ಅಣಾನೇ ಕೊಟ್ಬಿಡಿ" ಅಂತ. ಅಣ! ಅಣ! ಅಣ! ಈ ಮಾರಾಯ ಎಲ್ಹಾದ್ರೂ ಅಣ! ಅಣ!! ಅಣ!! ಅಂತ್ಲೇ ಬಾಯ್ಬುಡ್ತಾನೆ ನೋಡಿ

ಪುರು:—ಸಾಕೋ, ಮುದ್ದ! ಸಾಕು: ಇನ್ನು ಬೇರೆ ಯಾವದನ್ನಾದರೂ ಮಾತನಾಡಪ್ಪ. ಈ ಜಿಪುಣನ ಸ್ಮರಣೆ ಮಾಡಿ ಮಾಡಿ ಜನ್ಮ ಯಾತಕ್ಕೋಪ್ಪ ಕೆಡಿಸಿಕೊಳ್ಳೋದು? ಈಶ್ವರಪ್ನೋರು ಮನೇಲಿದ್ದಾರೇನೋ?

ಮು:—ಇದ್ದಾರೆ ಬುದ್ಧಿ! ಅವರೂ ಬೋ ಸೋತ್ಹೋಗವ್ರೆ ಪಾಪ! ಈ ಆಳು ಆರುವಯ್ಯನ ಇಂಸೆ ತಾಳನಾರದೆ!

ಪುರು:—ಸುಬ್ಬಮ್ಮನೋರು ಹೇಗಿದ್ದಾರೋ ಪಾಪ? ಬಹಳ ಕಷ್ಟಪಟ್ಟರು ಆಕೆ. ಮಗಳ ಮದುವೆ ಮಾಡಿಸೋದಕ್ಕೆ. ಅವರ ಹಣಾನೆಲ್ಲಾ ಕೊಟ್ಟುಬಿಟ್ರು ನಿಮ್ಮ ಎಜಮಾನ್ರು?

ಮು:—ಆಯೊಪ್ಪನಿಗೂ ಒಂದೇಡುಸಾವಿರದ ಗಂಟೆ ಕೊಡಬೇಕಿತ್ತು. ಅವೇ ಆ ಇನ್ನೂರು ಅಣ!

ಪುರು:—ಗೊತ್ತು.

ಮು:—ಅದರಾಗ್ ಒಂದು ಸಾವಿರ ರೂಪಾಯ್ಗೆ ಚಕ್ರ ಆಕ್ಬುಟ್ರು ನಮ್ಮಯ್ಯ. ನೋಡಿದ್ರೆ ಗಂಡ ಸತ್ತೋದ್ರು! ಗತಿ ಇಲ್ದ ಎಂಗ್ಸರ ದುಡ್ಡು! ನೀವೇಳ್ಬೇಡಾ ಅಂತೀರಿ ಬುದ್ಧಿ! ಆ ನಾಗೊಪ್ಪನ ದುಡ್ಡಿಗೂ ಚಕ್ರಾ ಆಕ್ಬುಡಬೇಕೂಂತ ತ್ರಿಗೆದವ್ನೆ ಚಾಣಿಕ್ಯನ ಇದ್ದೇಯ! ಓದ್ನೇ ವರುಸ ಆ ಗುಂಡೂರಾಯರು, ಪಾಪ! ಮಕ್ಕಳೊಂದಿಗ್ರು. ಬೋ ಒಳ್ಳೆ ಮನುಸ್ರು! ಅವರೋಗಿ ನೇಣು ಆಕ್ಕೊಂಡ್ರಲ್ಲಾ. ಅವರ ಸಾಯೋದ್ಕೆ ಯಾರು ಕಾರಣಾ ಬುದ್ಧೀ! ಅವರಂತೇ ಒಳ್ಳೇವ್ರು ನೋಡಿ. ಕೆರೆ ಕಟ್ಟೆ ಆಲದ ಮರದ ತಾವಾ ಒಂದು ಜನ ಸೇರುತಾ ನೋಡಿ. ಅಂಗ್

ಸೇರಿತ್ತು. ಒಂದು ಜಾತ್ರೆ ಜನ ಬುಡಿ ಬುದ್ಧಿ! ಅಯ್ಯೋ ಬುಡಿ ಪುರುಸೋತ್ತಮಪ್ನೋರಾ! ಚಿಕ್ಕು ಅಲು ಕುಡೀತ್ತೈತೆ ಯಾರಿಗೂ ತಿಳೀಬೇಡ್ದೂಂತ।

ಪುರು.—ಮುದ್ದ! ಎಲ್ಲಿಯಾದ್ರೂ ಹಾಳಾಗಿ ಹೋಗ್ಲಿ ಬಿಡು. ನೀನು ಮನೇಗೆ ಹೋದ್ರೆ ಈಶ್ವರಪ್ನೋರಿಗೆ ಹೇಳು. ನಾನು ಸಂಜೇಗೆ ಬರ್ತೀನೀ ಅಂತ.

ಮು:—ಆಗಲಿ ಬುದ್ಧಿ!

ದೃಶ್ಯ ೯] [ಸ್ಥಾನ:– ಒಂದು ಅರಣ್ಯ.

[ಪಾತ್ರಗಳು:– ಸಂಗಪ್ಪ, ಐದಾರು ಜನ ಡಕಾಯಿತಿಗಳು]

ಸಂ:—(ಸ್ವಗತ) ಅಯ್ಯೋ ದೇವರೆ! ಏನು ಕರ್ಮವಪ್ಪಾ ನಂದು? ಹಾಳು ಜಿಪುಣನ ಸಹವಾಸ ಮಾಡಿದೆ. ಮಾನ ಕಳೀತೀನಿ, ಹಾಗೆ ಮಾಡ್ತೀನಿ, ಹೀಗೆ ಮಾಡ್ತೀನಿ, ಅಂದ. ಏನೂ ತೋರಲಿಲ್ಲ. ಕೊನೆಗೆ ಈ ಕಟುಕ ಗಂಗಾಧರನನ್ನು ಕೊಲೆ ಮಾಡಿಬಿಡಲೇ ಅನ್ನಿಸುತ್ತೆ. ಬೇಡ, ಕಾಳೂ ಅಂತ ಅಡ್ಡ ಹಾಕುತ್ತೆ ಹಾಳು ಮನಸ್ಸು! ಇವನನ್ನು ಕೊಲೆಮಾಡಿ ಬಿಟ್ರೆ ಒಂದೇಸಲ ನೆಗೆದು ಬಿದ್ದುಹೋಗ್ತಾನೆ; ಭೂಲೋಕದಿಂದ! ಛೀ! ಛೀ! ಗಂಗಾಧರ ಹಾಗೆಲ್ಲಾ ಸತ್ತುಹೋದರೆ ಅವನ ಪುಂಡು ತನಕ್ಕೆ ಪ್ರತಿಫಲವನ್ನು ಅನುಭವಿಸಿದಹಾಗೆ ಆಗಲಿಲ್ಲ. ಸರಿ, ಅವನ್ನ ಕೊಲೆಮಾಡಿದ್ರೆ ತಕ್ಷಣ ನನ್ನ ಏರಿಸ್ತಾರೆ ಗಲ್ಲಿಗೆ! ಥೂ! ಮಾನ ಹೋಗುತ್ತೇಂತ ದಂಪತಿ ಮಕ್ಕಳನ್ನ ತವರುಮನೆಗೆ ಕಳುಹಿಸಿದೆ. ಈಗ ವನವಾಸ ಬೇರೆ ಪ್ರಾಪ್ತಿ. ಈ ಪಾಪಿ ಪ್ರಭಾವದಿಂದ! ಇನ್ನು ಇವನ್ನ ಕೊಲೆಮಾಡೋದು! ನಾನು ಗಲ್ಲಗೆ ಹೋಗೋದು! ಹೂಂ! ಅಂಥಾ ಗ್ರಹಚಾರ ನನಗೇನು ಬಂದಿದ್ದು! ಇವನ ಪಾಪಕ್ಕೆ ನಾನು ಪ್ರಾಣ ಕಳೆದುಕೊಳ್ಳಲಿ? ಛೀ! ಛೀ! ಈ ಪರಮಚಂಡಾಲ! ಜನಗಳ ಚರ್ಮ ಸುಲಿದೂ, ಸುಲಿದೂ, ಇನ್ನೂ ಅವನಿಗೆ ಸಾಕಾಗಲಿಲ್ಲ. ಇವನು ಏನ್‌ದನಾ ಸತ್ರೆ ಬಂದ ಪ್ರಯೋಜನ? ಇವನಿಗೊಂದು ಸರಿಯಾದ ಹೊಡೆತ ಬೀಳಬೇಕು. ಆದ್ದರಿಂದ ಹುಚ್ಚು ಹಿಡಿದಹಾಗಾಗಬೇಕು.

ನರಳಬೇಕು. ನರಳೋದೂಂದ್ರೆ ಅಷ್ಟಿಷ್ಟಲ್ಲ! ಹುಟ್ಟಿದಾರಭ್ಯ ಎಷ್ಟೆಷ್ಟು ಜನರನ್ನು ಎಷ್ಟೆಷ್ಟು ಬಗೆಯಲ್ಲಿ ಗೋಳಾಡಿಸಿದನೋ ಅದಕ್ಕೆ ಒಂದಕ್ಕೆ ನೂರರಂತೆ ನರಳುವ ಹಾಗೆ ಮಾಡಬೇಕು. ಇವನ್ನ ನೋಡಿ ಇನ್ನೀ ಪ್ರಪಂಚದಲ್ಲಿರುವ ಜಿಪುಣರಿಗೆಲ್ಲಾ ಎದೆ ಒಡೆದು ತುಂಡುತುಂಡಾಗಿ ಹೋಗಬೇಕು. "ಜಿಪುಣತನ ಸಾಕಪ್ಪಾ ಇನ್ನು" ಅಂತ ಅನ್ನಿಸಬೇಕು "ಕೇಳೋಕೆ ಮುಂಚೆ ತಕ್ಕೊಂಡು ಹೋಗಪ್ಪಾ" ಅಂತ ಹೇಳೋ ಬುದ್ಧಿ ಬರಬೇಕು ಜಿಪುಣರಿಗೆಲ್ಲಾ. ಹೂಂ! ಇರಲಿ. ಈ ದ್ರೋಹಿ! ಚಂಡಾಲ! ಕಿರಾತಕ! ಪಾತಕಿ! ಪೀಡೆ! ಗಂಗಾಧರ! ಜಿಪುಣ ಗಂಗಾಧರ! ನಿನ್ನ ಪಾಪಿ ರಕ್ತವನ್ನು ನೀನೇ ಕುಡಿಯಬೇಕು. ಹಾಗೆ ಮಾಡುತ್ತೇನೆ. ಗಂಗಾಧರ! ಅಧಮ! ನೀಚ! ಮನೆಹಾಳು ಕೊಲೆ ಪಾತಕ! ಧರ್ಮವು ನನ್ನ ಭಾಗದಲ್ಲಿದ್ದರೆ ನೋಡು! ನಾನು ನಿನಗೆ ಮಾಡುವ ಪ್ರತೀಕಾರ! ಹೂಂ!

[ ಐದಾರು ಜನ ಡಕಾಯಿತಿಗಳು ಪ್ರವೇಶಿಸಿ ]

ಹಿಡಿಯಿರಿ! ಹಿಡಿಯಿರಿ! ( ಎಂದು ಆರ್ಭಟಮಾಡುವರು )

ಸಂ:—ಅಪ್ಪಾ ತಡೆಯಿರಿ! ನೀವ್ ಯಾರು?

ಡ 1 :—ನಮ್ಮನ್ನು ನೋಡಿದ್ರೆ ತಿಳಿಯೋದಿಲ್ವೇನೋ ಪಾಪ!

ಡ 2 :—ಅಯ್ಯೋ ಪಾಪ! ಹಾಲುಕುಡಿಯೋ ಮಗು!

ಡ 3 :—ತಡವೇತಕ್ಕೆ?

ಡ 4 :—ಅವನನ್ನು ಶೋಧಿಸಿರಿ!

ಸಂ:—ನೀವು ಮನುಷ್ಯರೇನೋ ಅಹುದು. ಆದರೆ.........

ಡ 1 :—ಏನದು? ಬೇಗ ಒದರು! ನಿನ್ನಲ್ಲಿರುವುದನ್ನು ತೆಗೆದಿಡು ಬೇಗ. ಹೂಂ! (ಎಂದು ಹೇಳಿ ಕತ್ತಿಯನ್ನು ಬಿಚ್ಚಿ ಎದೆಗೆ ತೋರುವರು.)

ಸಂ:—ಅಪ್ಪಾ! ನೀವು ಡಕಾಯಿತಿಗಳು!

ಡ:—ಆಹುದು, ಸುಪ್ರಸಿದ್ಧ ಡಕಾಯಿತಿಗಳು !

ಸಂ:—ನನ್ನಿಂದ ನಿಮಗೆ ಯಾವ ಪ್ರಯೋಜನವೂ ಇಲ್ಲ. ನನ್ನಲ್ಲಿ ಏನೂ ಇಲ್ಲ.

ಡ:—ಏನೂ ಇಲ್ಲ!

ಸಂ:—ಉಹುಂ! ನೀವೇ ಶೋಧಿಸಿ ನೋಡಿಕೊಳ್ಳಿ.

ಡ:—(ಶೋಧಿಸಿನೋಡಿ ನಿರಾಶರಾಗಿ) ಏಯ್! ನೀನು ಇಲ್ಲಿ ಯಾತಕ್ಕೆ ಬಂದೆ? ನಮ್ಮಮೇಲೆ ಹೊಂಚೋ! ಇದೋ! (ಎಂದು ತಿವಿಯುವುದಕ್ಕೆ ಹೋಗುವರು.)

ಸಂ:—ತಾಳಿ! ನೀವು ಡಕಾಯಿತಿಗಳಾದರೂ ನಿಮಗೆ ಕನಿಕರವುಂಟು. ಡಕಾಯಿತಿಗಳ ಕಥೆಯನ್ನು ನಾನು ಕೇಳಿಬಲ್ಲೆ.

ಡ:—ಏನೆಂದೆ? ಕನಿಕರವೆ?

ಸಂ:—ಆಹುದು. ಡಕಾಯಿತಿಗಳು ಬರಿಯ ಕೊಳ್ಳೆಗಾರರಲ್ಲ. ಕೇವಲ ಕೊಲೆ ಪಾತಕರಲ್ಲ. ಅವರೆಲ್ಲರೂ ಘಾತುಕರೆಂಬುದನ್ನು ನಾನು ನಂಬುವುದಿಲ್ಲ.

ಡ:—(ಉತ್ಸಾಹದಿಂದ) ಹಾಗಾದರೆ?

ಸಂ:—ಡಕಾಯಿತಿಗಳು ಕೊಳ್ಳೆಗಾರರನ್ನು ಕೊಳ್ಳೆ ಹೊಡೆಯುವರು. ಕೊಲೆ ಪಾತಕರನ್ನು, ನೀತಿ ನಡತೆಗಳಿಲ್ಲದ ಮತಿಗೇಡಿ ಚಂಡಾಲರನ್ನು, ಅವರು ಕೊಲೆಮಾಡುವರು.

ಡ:—(ಮತ್ತೂ ಉತ್ಸಾಹದಿಂದ) ಹೂಂ! ಹೇಳು! ಬಹಳ ಸ್ವಾರಸ್ಯವಾಗಿದೆ.

ಸಂ:—ಡಕಾಯಿತಿಗಳಿಗೂ ಹೃದಯವುಂಟು! ಆತ್ಮವುಂಟು! ಕನಿಕರವುಂಟು! ಅವರು ಬಡವರನ್ನೂ, ಗತಿಯಿಲ್ಲದವರನ್ನೂ, ಎಳೆಮಕ್ಕಳನ್ನೂ, ಕೈಲಾಗದ ಹೆಂಗಸರನ್ನೂ, ಹಿಂಸಿಸುವುದಿಲ್ಲ! ಡಕಾಯಿತಿಗಳಿಗೂ ನ್ಯಾಯವುಂಟು! ನಡತೆಯುಂಟು!

ಡ:—ಭೇಷ್! ನೀನರಿತವನು! ಆಮೇಲೆ?

ಸಂ:—ಬಡವರನ್ನು [illegible]ಮಾಡಿ, ಬಹುಗರ್ವದಿಂದ ಕಣ್ಣು ಮುಚ್ಚಿಹೋಗಿ, ಕೈಕಾಲು ತಿಳಿಯದೆ, ಮದಿಸಿ, ಕುಣಿಯುವ ಧನಿಕರನ್ನು ಡಕಾಯಿತಿಗಳು

ಕೊಳ್ಳೆ ಹೊಡೆಯುವರು. ಆ ಹಣವನ್ನು ಕೊಂಡುಹೋಗಿ ತಾವೂ ಉಪಯೋಗಿಸಿಕೊಳ್ಳುತ್ತಾರೆ. ಒಂದು ಭಾಗವನ್ನು ಸತ್ಕಾರ್ಯಕ್ಕೆ ಇಡುತ್ತಾರೆ ಮತ್ತೊಂದು ಭಾಗವನ್ನು ಬಡವರಿಗೆ ಕೊಡುತ್ತಾರೆ. ಇದನ್ನು ಬಹಳ ಕೇಳಿಬಲ್ಲೆ.

ಡ:— ಭೇಷ್ ! ಭೇಷ್ ! ನೀನು ಯಾರು ? ಇಲ್ಲಿಗೇಕೆ ಬಂದೆ ?

ಸ:—ಕುಳಿತುಕೊಳ್ಳಿ, ಹೇಳುತ್ತೇನೆ. ನಿಧಾನವಾಗಿ ಕೇಳಿ. (ಡಕಾಯಿತಿಗಳೆಲ್ಲರೂ ಸಾವಧಾನವಾಗಿ ಕುಳಿತುಕೊಳ್ಳುವರು) ನಾನೊಬ್ಬ ಸಾಧಾರಣವಾದ ವ್ಯಾಪಾರಿ. ಸಂಸಾರಸ್ಥ. ನನ್ನ ಹೆಸರು ಸಂಗಪ್ಪ. ನಮ್ಮ ಊರಿನಲ್ಲಿ ಒಬ್ಬ ಸಾಹುಕಾರ....... .......

ಡ:—ಸಾಹಾಕಾರ !

ಸಂ:—ಅಹುದು, ಸಾಹುಕಾರ ! ಗಂಗಾಧರಭಟ್ಟ ಅಂತ ಅವನ ಹೆಸರು. ಅವನು ನನಗೆ ಸ್ವಲ್ಪ ಹಣ ಸಾಲ ಕೊಟ್ಟಿದ್ದ. ವಾಪಸ್ಸು ಕೊಡೂಂತ ಕೇಳಿದ. ನನ್ನಲ್ಲಿಲ್ಲ ಈಗ ಅಂತಂದೆ. ಸ್ವಲ್ಪ ಸುಧಾರಿಸಿ ಅಂತ ಅಂಗಲಾಚಿ ಬೇಡಿಕೊಂಡೆ. ಕೇಳಲಿಲ್ಲ. ಸರಿ, ದಾವಾ ಹೂಡ್ದ. ಡಿಕ್ರಿ ಪಡೆದ. ಜಫ್ತಿ ವಾರಂಟು ತಂದ. ನಾನು ನೋಡಿದೆ. ಈ ಅವಮಾನಾ ಸಹಿಸೋಕ್ಕಾಗೋಲ್ಲಾಂತ ಹೆಂಡತಿ ಮಕ್ಕಳನ್ನು ತವರು ಮನೆಗೆ ಕಳಿಸಿಬಿಟ್ಟು ಈ ಚಂಡಾಲ ಗಂಗಾಧರನಿಗೆ ತಕ್ಕ ಪ್ರತೀಕಾರ ಮಾಡಬೇಕೂಂತ ಮನಸ್ಸಿನಲ್ಲಿ ನಿರ್ಧರ ಮಾಡಿಕ್ಕೊಂಡೆ. ದಾರಿ ತೋರಲಿಲ್ಲ. ಹೀಗೆ ಬಂದುಬಿದ್ದೆ; ಈ ಅರಣ್ಯದಲ್ಲಿ. ಅಷ್ಟರಲ್ಲಿ ನೀವೂ ಬಂದಿರಿ. ನನ್ನ ಪುಣ್ಯವೆಂದೇ ಹೇಳಬೇಕು. ದೇವರು ನನ್ನ ಮೊರೆಯನ್ನು ಕೇಳಿ ನಿಮ್ಮನ್ನು ಇಲ್ಲಿಗೆ ಕಳುಹಿಸಿದ್ದಾನೆ.

ಡ:—ಸರಿ, ಹಾಗೆಯೇ ಇಟ್ಟುಕೊಳ್ಳೋಣ.

ಸಂ:— ಈಗ ನೀವೊಂದು ಕೆಲಸವನ್ನು ಮಾಡುವುದಾದರೆ ನಿಮಗೂ ಬೇಕಾದ ಆದಾಯವುಂಟು. ನನ್ನ ಪ್ರತೀಕಾರವೂ ನೆರವೇರಿದಂತಾಗುತ್ತದೆ.

ಡ:—ಏನದು ? ಬೇಗ ಹೇಳು. ತಡವರಕೋಬೇಡ.

:—ಈ ಗಂಗಾಧರ! ಜಿಪುಣ ಅಂದರೆ ಬೋ ಜಿಪುಣ! ದುಡ್ಡಿಗಾಗಿ ಒಡ ಹುಟ್ಟಿದವರನ್ನೂ, ಹೆತ್ತ ಮಕ್ಕಳನ್ನೂ ಸಹ ವಂಚನೆ ಮಾಡಿದ್ದಾನೆ. ಬಡವರನ್ನ ಕಾಡಿ, ಅವರ ಹಣವನ್ನು ದೋಚಿಕೊಂಡು, ಲೆಕ್ಕವಿಲ್ಲದಷ್ಟು ಕುಟುಂಬಗಳನ್ನು ನಾಶಮಾಡಿದ್ದಾನೆ. ಇವನ ಕಾಟವನ್ನು ತಡೀಲಾರದೆ ಕೆಲವರು ನೇಣುಹಾಕಿಕೊಂಡು ಸತ್ತಿದ್ದಾರೆ ಇವನೊಬ್ಬ ಕಿರಾತಕ! ಎಂಜಲು ತಿನ್ನುವ ಹಂದಿ! ಇವನ ಹತ್ತಿರ ಈಗ ಪರಿಮಿತಪಷ್ಟ ನಗದು ಗಿಗದು ಎಲ್ಲಾ ಒಟ್ಟು ಎರಡು ಲಕ್ಷಕ್ಕೆ ಮೇಲೆ ಇವೆ ಎಲ್ಲಾ ಮನೇಲೇ ಇವೆ. ಒಂದು ನೆಲಮಾಳಿಗೆ ಮಾಡಿ ಅದರ ಮೇಲೆ ಹಾಸಿಗೆ ಹಾಸಿ ಮಲಕ್ಕೋತಾನೆ "ತಾ ಕಳ್ಳ ಪರರನ್ನ ನಂಬ". ಇವನ ಹಾವಳಿ ಬಹಳ ಹೆಚ್ಚಿಹೋಗಿದೆ. ಇವನ ಸಾಲ ಪತ್ರಗಳೆಲ್ಲಾ ಮನೇಲ್ಲೇ ಇವೆ ನೀವು ಒಪ್ಪುವುದಾದರೆ ಇವನ ವಾಸಸ್ಥಳಕ್ಕೆ ನಿಮ್ಮನ್ನು ಕರೆದುಕೊಂಡು ಹೋಗುತ್ತೇನೆ. ಅವನ ನಗದು, ನಗೆ ನಟ್ಟು, ನಾಣ್ಯ, ಎಲ್ಲಾ ನೀವು ಕೊಳ್ಳೆಹೊಡೆದುಕೊಳ್ಳಬಹುದು. ಆದರಲ್ಲ ನನಗೊಂದು ಬಿಡಿಕಾಸು ಬೇಡ. ಆದರೆ ಅವನನ್ನು ಹಿಡಿದು, ಬಂಧಿಸಿ—ಅವನು ಬಾಯಿ ಬಡಿದ್ರೂ, ಬಡಿನ್ರೂ, ಸಂಪಾದಿಸಿ ಕೂಡಿ ಹಾಕಿದ, ಜೊಂತೆ ಜೊಂತೆಗಳಲ್ಲಿ ಕಟ್ಟಿಹಾಕಿರುವ, ಬಿಡಿಕಾಸುಗಳನ್ನೂ, ಆಶೆ, ಪಾವಲಿ, ರೂಪಾಯಿಗಳನ್ನೂ, ಬಿಡದೆ ಕೊಳ್ಳೆ ಹೊಡೆದು, ಅವನ ವಿಶಿಷ್ಟ ಪತ್ರಗಳನ್ನೂ, ಕೋರ್ಟು ರಿಕಾರ್ಡುಗಳನ್ನೂ, ಅವನೆದುರಿನಲ್ಲಿಯೇ ತುಂಡು ತುಂಡಾಗಿ ಹರಿದುಹಾಕಿ, ಅವಕ್ಕೆ ಬೆಂಕಿ ಹಚ್ಚಿ, ಭಸ್ಮ ಮಾಡಬೇಕು. ಹೀಗೆ ಮಾಡಿದರೆ ಎಷ್ಟೋ ಬಡ ಸಂಸಾರಗಳು ನಿಮ್ಮಿಂದ ಉದ್ಧಾರವಾದಂತೆ ಆಗುತ್ತೆ ಕೊಲೆ ಸಲ್ಲುತ್ತೆ. ಆಗ ಗಂಗಾಧರನ ಕಟುಕತನಕ್ಕೂ, ಕಾರ್ಪಣ್ಯಕ್ಕೂ, ತಕ್ಕ ಪ್ರತೀಕಾರವನ್ನು ಮಾಡಿದಂತಾಗುವುದು ಇಷ್ಟು ಕೆಲಸಕ್ಕೆ ನೀವು ನೆರವಾಗುವುದಾದರೆ ನಾನು ನಿಮ್ಮ ನಂಬುಗೆಯ ಅಡಿಯಾಳಾಗಿದ್ದು ನಿಮ್ಮ ಕೆಲಸವನ್ನು ನೆರವೇರಿಸಿ ಕೊಡುವೆನು. ನನ್ನ ಹೃದಯದ ಸೇಡೂ ತೀರಿದ-ಹಾಗುವುದು. ನಿಮ್ಮ ಅಂತರ್ಯವನ್ನು ನಾನು ಹೊರಗೆಡಹುವುದಿಲ್ಲ ನನ್ನನ್ನೂ ನೀವು ಬಿಟ್ಟುಕೊಡಬಾರದು.

ಡ:—ಒಪ್ಪಿದೆವು ಸಂಗಪ್ಪ! ಇದೋ! (ಎಂದು ಕತ್ತಿಗಳನ್ನು ಮುಟ್ಟಿ ಪ್ರತಿಜ್ಞೆಯನ್ನು ಮಾಡುವರು. ಅಲ್ಲದೆ) ಜೈ! ಭವಾನಿ ಮಾತಾಕಿ! (ಎಂದು ಜೈಕಾರ ಮಾಡುವರು).

ದೃಶ್ಯ ೧೦] [ಸ್ಥಾನ:— ಬೀದಿ.

[ಪಾತ್ರ:— ನಾಗು]

(ಸ್ವಗತ) ಅಯ್ಯೋ ದೇವರೇ! ನನ್ನ ಗಂಡನ್ನ ಬಾಯಲ್ಲಿ ಹಾಕ್ಕೊಂಡೆ. ತಾಳಲಾರದಷ್ಟು ಕಷ್ಟವನ್ನೆಲ್ಲಾ ಅನುಭವಿಸಿದೆ. ಎರಡು ಹೊತ್ತು ಅನ್ನಕ್ಕಾಗಿ ಹೊಟ್ಟೇಲಿ ಹುಟ್ಟಿದ ಮಗುವನ್ನು ಕಾಡುಪಾಲು ಮಾಡಿದೆ. ಈ ಜಿಪುಣ! ಈ ಮನೆಹಾಳು ಪುಗುಕನ ಮನೇಲಿ ಕೆಲಸಕ್ಕೆ ಸೇರಿಕೋಬೇಕಾಗಿ ಬಂತಲ್ಲಾ! ಅಯ್ಯೋ ಅದೃಷ್ಟವೇ! ದುಡಿದೂ, ದುಡಿದೂ, ಸೋತುಹೋದೆ. ಲೆಕ್ಕ ಮಾಡೋಹಾಗಿಲ್ಲ ತಿಂದ ಬೈಗಳು! ಅದೆಷ್ಟು ಛೀಮಾರಿ! ಅದೆಷ್ಟು ದೂಷಣೆ! ಅದೆಷ್ಟು ಶಾಪ! ಮನಸ್ಸೆಲ್ಲಾ ಕೆಟ್ಟು ಹಾಳಾಗಿ ಹೋಯಿತು. ಅಯ್ಯೋ ಲೋಭಿ ಮುಂಡೇದೇ! ನನ್ನ ಹಣ ನುಂಗಿಕೊಂಡೆಯಲ್ಲೋ ಪಾಪಿ! ಹೆಂಗಸಿನ ಹಣಾ ನುಂಗಿಕೊಂಡೆಯಲ್ಲೋ? ಹಣ ಕೊಡ್ತೀನಿ ಕೊಡ್ತೀನಿಂತ ಕೊನೆಗೂ ಮೋಸ ಮಾಡಿದೆಯಲ್ಲೋ? ಪತ್ರವಾದರೂ ಬರ ಕೊಡೂಂತಂದ್ರೆ "ನಿನ್ನ ಮೋಸಾ ಮಾಡ್ತೀನಾ ನಾನೂ?" ಅಂತ ಬಾರಿಬಾರಿಗೂ ಬೊಗಳಿದೆಯಲ್ಲೋ? ಮಗನ ಮದುವೇ ಮಾಡಿ ಕಣ್ತುಂಬಾ ನೋಡಿ ಸಂತೋಷಪಟ್ಟುಬಿಡಬೇಕೂಂತಿದ್ದೆನಲ್ಲೋ? ನನ್ನ ಎಲ್ಲಾ ಆಸೇಮೇಲೂ ಕಲ್ಲೆಳೆದೆಯಲ್ಲೋ? ಪಾಪಿ! ಅಯ್ಯೋ! ಬುದ್ಧಿಯಿಲ್ಲದ ನಾಗೂ! ಹೀಗೆ ಹಣವೆಲ್ಲಾ ಹೋಗಿ ತೀರ ಕೆಟ್ಟುಹೋದ ಮೇಲೆ ಬುದ್ಧೀ ಬಂತೇನೇ ನಿಂಗೆ? ಅಯ್ಯೋ! ಕಿರಾತಕ! ಪಾತಕಿ! "ಸೊಸೆಗೂ ಅನ್ನಾ ಹಾಕಿ ನಿನಗೂ ಅನ್ನ ಹಾಕಿದ್ರೆ ನನ್ನ ಮನೆ ಹಾಳಾಗಿ ನಾನು ಸಾಲಗಾರನಾಗಿ ಹೋಗ್ತೀನೆ. ನೀನು ನಡಿ ಆಚೇಗೇ" ಅಂದೆಯಲ್ಲೋ! ನಿನ್ನ ಬಾಯಲ್ಲಿ ಬಂದಹಾಗೇ ಆಗಿಹೋಗ್ಲಿ. ನಿನ್ನ ಮನೆ ಹಾಳಾಗಿ ಹೋಗ್ಲಿ! ಪಾಪಿಷ್ಠ ಮುಂಡೇದೆ!

ಎಲ್ಲಾರ ಹಣಾನೂ ಬಳಿದೂ ಬಳಿದೂ ನಿನ್ನ ಬಕಾಸುರ ಹೊಟ್ಟೆ ತುಂಬಿಕೊಂಡೆಯೆಲ್ಲೋ! ಅಘನು! ಚಂಡಾಲ! ನಿನಗೂ ಒಬ್ಬ ಭೀಮ ಎಲ್ಲಿಯಾದ್ರೂ ಹುಟ್ಟಿಯೇ ಇದ್ದಾನೆ! ನಿನ್ನ ಹೊಟ್ಟೇಲಿರೋದ ನ್ನೆಲ್ಲಾ ಕಕ್ಕಿಸಿಬಿಡ್ತಾನೆ ಇರು. ಆಗ ನೀನೂ ದಿಕ್ಕಿಲ್ಲದ ಪರದೇಶಿ ಯಾಗಿ ಹುಚ್ಚು ಹಿಡಿದು ಹಾಳಾಗಿ ಹೋಗ್ತೀಯಾ! ನೋಡುಕೋ! ನಾಗೂ ನೊಂದು ನುಡಿಯೋ ಮಾತು! ಬಕಾಸುರ ಮುಂಡೇದೇ ಕರ್ಮಿಷ್ಟ ಮುಂಡೇದೇ! ನಿನ್ನ ಹಾಳಾದ ಕಾರ್ಪಣ್ಯಕ್ಕೂ ನಿನಗೂ ಒಂದೇ ಸಲ ಬೆಂಕಿ ಬಿದ್ದುಹೋಗುತ್ತೆ ನೋಡಿಕೊಂಡಿರು! ಛಂಡಾಲ ಮುಂಡೇದೇ!

ದೃಶ್ಯ ೧೧] [ಸ್ಥಾನ: ಗಂಗಾಧರನ ಮನೆ.

[ಪಾತ್ರಗಳು: ಗಂಗಾಧರ, ಸುಂದರಿ, ಮುದ್ದು, ಈಶ್ವರ, ಶಾರದೆ]

ಗಂ:—ಸುಂದರೀ! ಸುಂದರೀ!

ಸುಂದರಿ:—ಬಂದೇಪ್ಪಾ! (ಬಂದು) ಏನಪ್ಪಾ?

ಗಂ:—ಸುಂದರು! ನಿಮ್ಮ ಸೋದರಮಾವ ಶ್ಯಾಮೂ ಮನೇಲಿ ಹೇಗೆ ಕಾಲ ವಂತೆ. "ಸಹಾಯಕ್ಕೆ ಯಾರೂ ಇಲ್ಲ, ಹೇಗೂ ಅವಳಿಗೆ ಸ್ಕೂಲಿಗೆ ರಜಾ ಆಯಿತಲ್ಲಾ, ಸ್ವಲ್ಪ ಕಳಿಸಿ ಕೊಡ್ತೀರಾ!" ಅಂತ ಕೇಳ್ದ ನಿಮ್ಮ ಮಾವ. ಒಂದು ನಾಲ್ಕು ದಿವಸ ಹೋಗಿದ್ದು ಬರ್ತೀಯೋನೆ?

ಸುಂ:—ಹೌದಪ್ಪಾ! ಅವರ ಕಷ್ಟಕಾಲದಲ್ಲಿ ನಮ್ಮ ಕೈಲಾದ ಸಹಾಯ ಮಾಡಬೇಕು. ಆಗಲೀಪ್ಪಾ! ಹೋಗಿ ಬರುತ್ತೇನೆ.

ಗಂ:—ಮುದ್ದನ್ನೂ ಜೊತೇಲಿ ಕರಕೊಂಡು ಹೋಗು. ಒಬ್ಬಳೇ ಹೋಗ ಬೇಡ. ಎಲ್ಲಿ ನಿನ್ನ ಆಭರಣಾನ್ನೆಲ್ಲಾ ತೆಕ್ಕೊಡು.

ಸುಂ:—ಆಭರಣ ಯಾಕಪ್ಪಾ?

ಗಂ:—ಅಲ್ಲಾ ಕಾಣೆ ಹುಚ್ಚಿ! ಇತರರ ಮನೇಗೇ ಹೋಗೋದು. ಅಲ್ಲಿ ಲ್ಲಾದ್ರೂ ಕಳೆದುಹೋಗೂದೂ. ಅದೆಲ್ಲಾ ಯಾತಕ್ಕೆ? ಬೇಡದ

ಗ್ರಹಚಾರ! ಎಲ್ಲಾ ಇಲ್ಲಿ ಇರಲಿ. ನೀನು ಬಂದಮೇಲೆ ಹಾಕ್ಕೊಂತೀ ಯಂತೆ!

ಸುಂ:—ಬಹಳ ಚೆನ್ನಾಗಿದೆಯಪ್ಪಾ ನೀನು ಹೇಳೋದು. ಅಲ್ಲಾ, ಹಾಗಾದ್ರೆ ಮಾವನ ಮನೇಲಿ ಎಲ್ಲಾ ಕಸುಕೊಂಡುಬಿಡ್ತಾರೆಯೇ? ಮಾವನಿಗೆ ನನ್ನ ಕಂಡರೆ ಪ್ರಾಣ. "ಸುಂದರೂ! ಸುಂದರೂ?" ಅಂತ ಯಾವಾಗ ನೋಡ್ಲಿ ಕಣ್ಣೀರುಬಿಡ್ತಾನೆ. ನೀನು ಹೇಳೋದು ನೋಡಿದ್ರೆ...

ಗಂ:—ನೀವೆಲ್ಲಾ ಒಂದೇ ಮಾದ್ರಿ ಕಾಣೇ! ನನ್ನ ಮಾತೇ ನಿಮಗ್ಯಾರಿಗೂ ಸರಿಬೀಳೋಲ್ಲವಲ್ಲಾ ಯಾಕೇಂತ? ಅದೇನು ಹಾಗಾದ್ರೇಂದೆ? ಕತ್ತೇಗೆ ಆದ ಹಾಗಾಗಿದೆ ನನಗೆ ವಯಸ್ಸು. ನನಗೇನು ಬುದ್ಧಿ ಯಿಲ್ಲಾಂತ್ಲೆ? ಯೋಚನೆಯಿಲ್ಲಾಂತ್ಲೆ?

ಸುಂ:—ಹೌದಪ್ಪ! ಯಾವುದಕ್ಕೆ ಯಾವುದು ಸಂಬಂಧವೋ? ಮಾವ ನನ್ನನ್ನು ಪ್ರೀತಿಯಾಗಿ ನೋಡ್ತಾನೋ ಇಲ್ಲವೋ ಅದು ನಿಂಗ್ಸಹಿಸೋದಿಲ್ಲ. ನಿನ್ನಹಾಗಿದ್ಬಿಟ್ರೆ ಸರಿ, ಯಾವುದಕ್ಕೇನೂ ಕೊರತೇನೇ ಇಲ್ಲ!

ಗಂ:—ಏನೇ ಸುಂದರು ಹಾಗಂದರೆ?

ಸುಂ:—ನೀನು ಯಾರನ್ನೂ ನಂಬೋದಿಲ್ಲ. ಶಾರದೇ ಅತ್ತಿಗೆ ಮನೇಲಿ ಯಾವುದಕ್ಕೇನು ಕಮ್ಮಿ? ಹಾಗಿರಬೇಕಾದ್ರೆ ಅವತ್ತಂದೆ. 'ಲೇ ಸುಂದರೂ! ಅಡಿಗೆಮನೇಕಡೆ ಸ್ವಲ್ಪ ಜೋಪಾನವಾಗಿ ನೋಡ್ಕೊಳ್ಳೆ. ಶಾರದೇ ಸಿಕ್ಕಾಪಟ್ಟೆ ಕಾಫೀ ಗೀಫಿ ಮಾಡಿ ಕುಡಿದುಬಿಟ್ಬಾಳು. ಪದಾರ್ಥ ಹಾಳ್ ಮಾಡಬಿಟ್ಟಾಳು' ಅಂತೆಲ್ಲಾ. ಹಾಗೂ ನೋಡಿದ್ರೆ ಮದುವೇಮನೇ ಕಾಫೀಪುಡಿ ಇನ್ನೂ ಒಂದು ಡಬ್ಬ ಹಾಗೇ ಹಳಸಿ ನಾರತಾ ಇದೆ. ಅತ್ತಿಗೆ, ಪಾಪ! ಬಹಳ ನೊಂದುಕೊಂಡ್ಲು. ಏನೋಪ್ಪ! ನೆರೆಹೊರೆ ಯವರಲ್ಲಾ ಅವತ್ತು "ಏನೆ ಸುಂದರೂ! ನಿಮ್ಮ ಮನೇಲಿ ಯಾವಾಗ ನೋಡಿದರೂ ರಾದ್ಧಾಂತಾನೇನೇ? ನಿನ್ನ ತಂದೇಗೆ ಗತಿಯಿಲ್ಲವೆ? ಯಾಕ್ ಹಾಗಾಡ್ತಾರೆ? ಏನೋ ಹೊತ್ತುಕೊಂಡು ಹೋಗೋ ಹಾಗೇ"ಂತಲ್ಲಾ ಕೇಳಿದ್ರು. ಇದೇನಪ್ಪಾ ಹಾಳು ಅವಮಾನ? ಯಾರು ನೋಡಲಿ ನಿನ್ನ ಕಂಡ್ರೆ ನಟಿಕೇಮುರೀತಾರೆ.

ಗಂ:—ಲೇ ಸುಂದರೂ! ಈಶ್ವರ ಆರಂಭಿಸಿದ ನನ್ನ ಆಡೋದಕ್ಕೆ. ಅವನ ಹಂಕಾರ ಮಿತಿಮೀರಿ ಇಲ್ಲಪೆ ಹೋಯಿತು. ಇನ್ನ ನೀನು ಬೇರೆ ತೆಗೆದೆಯೇನೇ ಪುರಾಣಾನಾ? ಹೇಳೋಪ್ರೆಲ್ಲಾ ನನ್ನ ಮನೇಲಿ ತಂದು ಹಾಕ್ತಾರೆಯೇ ರಾಶೀನಾ? ಅಲ್ಲಾ ಇದೆಲ್ಲಾ ಏನೇ ಇದು?

ಸುಂ:—ಅಂತೂ ನಿನ್ನ ಮಾತೇ ನಿನಗೆ. ಅಲ್ಲಾಪ್ಪಾ! ಕಂಡ ಕಂಡವ್ರು ಕಂಡ ಕಂಡ ಹಾಗೆ ನಿನ್ನಂತಾ ಇಪ್ರೆ ಅದ್ಹ್ಯಾಗೆ ಸಹಿಸೋಕಾಗುತ್ತೆ? ನೀನೇ ಹೇಳಪ್ಪಾ. ಅವತ್ತು ನನ್ನನ್ನ ಈಶ್ವರನ ಮಾವನ ಮನೇಗೆ ಕಳಿಸಿದ್ದೆಯಲ್ಲಾ ಶಾರದೇ ಅತ್ತಿಗೇನ್ನ ಕರಕೊಂಡು ಬರೋದಕ್ಕೆ. ಅವತ್ತು ಕೇಳಿದ್ರೂ ಅವರ ಮನೇಲಿ "ಏನಮ್ಮಾ ಸುಂದರೂ! ಇದ್ಯಾಕೆ ನಮ್ಮ ಶ್ಯಾರದೇ ಇಷ್ಟು ಬಡವಾಗಿ ಹೋಗಿದ್ದಾಳೆ ಪಾಪ? ನೀನಾದ್ರೂ ಸ್ವಲ್ಪ ಜೋಪಾನವಾಗಿ ನೋಡುಕೋಮ್ಮಾ. ನೆಟ್ಟಗೆ ಊಟಾಕೂಡಾ ಸರಿಯಾಗಿ ಹಾಕೋದಿಲ್ಲ ಶಾರದೇಗೆ ನಿಮ್ಮ ಮನೇಲೀಂತ ಎಲ್ಲರೂ ಹೇಳ್ತಾರಲ್ಲಮ್ಮಾ! ನಿಮ್ಮ ತಂದೇವರಿಗಾದ್ರೂ ಹೇಳಮ್ಮಾ, ಊರ ಬಾಯಿಗೆ ಭಯಪಡಬೇಕೂಂತ. "ನಿಮ್ಮಪ್ಪನ ಮನೇಯಿಂದ ಹಣ ತಂದೆಯಾ? ಹಣ ತಂದೆಯಾ? ಅಂತ ಅರೀದ ಹುಡುಗೀನ್ನ ಪೀಡಿಸ್ತಾರಂತಲ್ಲಾ ನಿನ್ನ ತಂದೇವ್ರು"! ಅಂತ ಅದೇನೇನೋ ಹೇಳಿದ್ರು ನೋಡಪ್ಪಾ.

ಗಂ:—ನೋಡೇ ಸುಂದರೂ! ನಾನೆಲ್ಲಿ ಹೋಗಿ ಸಾಯಲೇ? ನಾನು ಸತ್ತು ಹೋದರೆ ಎಲ್ಲರಿಗೂ ಸಂತೋಷವಾಗಿರುತ್ತೆ ನೋಡು. ಅಲ್ಲ ಸುಮ್ಮನೆ ದುಂದು ಕರ್ಚು ಮಾಡಬೇಡಿ ಅಂತ ಯಾರಿಗೂ ಹೇಳಬೇಕೂಡದೇ? ಬರಬೇಕಾದ ಬಾಕಿಕೊಡೀಂತ ಕೇಳೂದೂ ತಪ್ಪೇ? ಹೂಂ! ನನಗೂ ಬಂದ್ಬಿಟ್ಟಿದೆ ಏನೋ ದೊಡ್ಡ ಗ್ರಹಚಾರ! ತಲೇಮೇಲೆ ಬಡಿದಿದೆ ಸಿಡಿಲು!

ಸುಂ:—ಸರಿ, ಬಿಡಪ್ಪಾ ಹೋಗಲಿ. ಶಾರದೇ ಅತ್ತಿಗೆ ಕಾಯಿಲೇಲಿ ಬಹಳ ನರಳತಾ ಇದ್ದಾಳೆ. ಸ್ವಲ್ಪ ಔಷಧೀನಾದ್ರೂ ತರಿಸಿಕೊಡಪ್ಪಾ. ನಾನು ಹೊರಡಲೇನಪ್ಪಾ ಹಾಗಾದ್ರೆ?

ಗಂ:—ಊಟಕ್ಕೆ ಅಲ್ಲೀ ಹೋಗ್ತೀಯೇನೆ?

ಸುಂ:—ಹೌದಪ್ಪ !

ಗಂ:—ಸರಿ ಹೋಗು ಸುಂದರು. ಒಡನೆ ಜೋಪಾನ ! ಜೋಪಾನ ! ಭದ್ರ ವಾಗಿ ನೋಡಿಕೊಳ್ಳಿ. (ಸುಂದರು ಹೊರಡುವಳು)

(ಸ್ವಗತ) ಹೋಗಲಿ. ಮನೇಲಿ ಎಷ್ಟು ಜನ ಕಮ್ಮಿಯಾದರೆ ಅಷ್ಟು ಖರ್ಚು ಕಮ್ಮಿ. ಆ ಶ್ಯಾಮರಾಯ ತಿರುಪತಿಬಾಕಿ ಕೇಳ್ತಾ ಇದ್ರೆ ಅವತ್ತು ಹಾಗೆಯೇ ಹೊರಟುಹೋದ. ಹಣಕ್ಕೆ ಚಕ್ಕರ್ ಹಾಕಿದ. ಹೂಂ ! ಸುಂದರೀಗೆ ಅನ್ನಾಹಾಕಿಯಾದ್ರೂ ಆ ಬಾಕಿ ತೀರಿಸಲಿ. ಅಹಹ ! (ನಗುವನು).

(ಪ್ರಕಾಶ) ಲೋ ಈಶ್ವರ! ಈಶ್ವರ !

ಈ:—(ಪ್ರವೇಶಿಸಿ) ಏನಪ್ಪಾ !

ಗಂ:—ಅಲ್ಲವೋ, ಈಶ್ವರು ! ಬಿ. ಎ., ಪಾಸಾದರೂ ಆಯಿತು. ನಿನಗಿನ್ನೂ ಬುದ್ಧಿ ಬರಲಿಲ್ಲ ನೋಡು. ಅಲ್ಲವೋ, ಎಂಟುನೂರು ರೂಪಾಯಿ ಕೊಡ್ತೀನೀ ಅಂದ್ರು ನಿಮ್ಮ ಮಾವಾವ್ರು. ಐನೂರೇ ಕೊಟ್ರು. ಇನ್ನು ಮುನ್ನೂರು ಯಾವಾಗ ಕೊಡ್ತಾರಂತೋ ? ನಿನಗೋ ಕೇಳೋದಿಕ್ಕೇ ಬೇಡವಾಗಿದೆ. ಎಲ್ಲಾ ಮಾನ ನೋಡು. ಬರಬೇಕಾದ ಬಾಕಿ ಕೇಳೋದಿಕ್ಕೂ ಧೈರ್ಯ ಸಾಲದು. ಹೀಗಾದ್ರೆ ಹೇಗೋ ಪ್ರಪಂಚ ವಲ್ಲಿ ಬದುಕಿ ಒಳ್ಳೆ ಹೆಸರು ಹೇಳೋದು ?

ಈ:—ಅಪ್ಪಾ ! ನನ್ನ ಬಿ. ಎ., ಖರ್ಚಿಗೆ ಅವರು ಕೊಟ್ಟಿರೋ ಐನೂರೇ ಯತೇಚ್ಛ ! ಹಾಗೂ ನೋಡಿದರೆ ಮುನ್ನೂರೇ ಖರ್ಚಾಗಿದೆ. ಇನ್ನೂ ಮುನ್ನೂರು ಕೇಳೋದು ಯಾವ ಧರ್ಮವೋ ನನಗೆ ಬೇರೆ ತಿಳೀದು. ಅದು ಹೋಗಲಿ. ಅಮ್ಮನು ಸಾಯೋವಾಗ ಹೇಳಿದ್ದಾಳೆ. "ಮಗು, ಈಶ್ವರ ! ನೀನು ಸಾಲ ಮಾಡಬೇಡ. ಸಾಲಾ ಕೊಡಲೂ ಬೇಡ. ಹಾಗೂ ಯಾರಿಗಾದ್ರೂ ಕೊಡಬೇಕೂಂತ ನಿನಗೆ ತೋರಿದ್ರೆ, ಏನೋ ನಿನಗೆ ಸಾಧ್ಯವಾದಷ್ಟನ್ನು ಸುಮ್ಮನೆ ಕೊಟ್ಟುಬಿಡು. ಮತ್ತೆ ಕೇಳ ಬೇಡ. ಬಾಕಿಸಾಕಿ ವಸೂಲ್‌ಮಾಡೋ ಕೆಲಸಕ್ಕೆ ನೀನು ಹೋಗ ಬೇಡ. ಹಾಗೇಂತ ಪ್ರಮಾಣ ಮಾಡು. ಹಾಗೂ ನನ್ನ ಮಾತನ್ನು ನಿರಾಕರಿಸಿ, ನಿನ್ನ ತಂದೇವ್ರು ಸಾಲ ವಸೂಲ್ ಮಾಡೋದಕ್ಕೆ ಹೋದ್ರೆ

ನಮ್ಮ ಕುಲವೇ ಅಳಿಸಿಹೋಗುತ್ತೆ. ಬೇಡ" ಅಂತಂದಿದ್ದಾಳೆ ಅಮ್ಮ. ನಾನೇಗೂ ಈ ಬಾಕಿ ವಸೂಲಿ ಕೆಲಸ ಮಟ್ಟಿಗೆ ನನ್ನಿಂದ ಸಾಧ್ಯವಿಲ್ಲ. ಅಮ್ಮನ ಮಾತು ಪರಿಪಾಲಿಸಬೇಕು.

ಗಂ:- ಈಶ್ವರು! ಮದುವೆ ಆದ್ರು ಆಯ್ತು! ನೀನು ಬಹಳ ಕೊಬ್ಬಿಹೋಗಿ ಬಿಟ್ಟೆ ನೋಡು.

ಈ.—ಹೌದು ನೀನು ಬಡಿಸಿದೆಯಲ್ಲ. ಇಪ್ಪತ್ತೆರಡು ವರ್ಷ ಪಂಚಭಕ್ಷ್ಯ ಪರಮಾನ್ನಾನಾ! ಅದನ್ನ ತಿಂದೂ ತಿಂದೂ ಕೊಬ್ಬಿದೆ! ನಿಜ, ಒಪ್ಕೋಬೇಕಾದ್ದೆ. ಮೊನ್ನೆ ಅತ್ತೇವರಂದ್ರು "ಅಳಿಯಂದಿರು ಬಹಳ ಇಳಿದುಹೋಗ್ಬಿಟ್ಟಿದ್ದಾರೆ. ಪಾಪ! ಪುಷ್ಟಿಯಾದ ಹಣ್ಣುಹಂಪಲು ತಂದು ಕೊಡಬೇಕು" ಅಂತ ಹೆತ್ತ ತಂದೆ! ಎಲ್ಲಿ ನಿನ್ನ ಬಾಯಲ್ಲಿ ಒಂದು ದಿವಸ ಅಂಥ ಮಾತು ಬಂತೆ? ಸುಮ್ಮನೆ ಹೇಳಿಕೊಂಡು ಸುಖವೇನು? ನನ್ನ ಕರ್ಮ! ನಾನೂ ಹುಟ್ಟಿದೆ ನಿನ್ನ ಮಗನಾಗಿ. ದೇವರು ಕಾಪಾಡ ಬೇಕು ಅಷ್ಟೆ!

ಗಂ:—ಈಶ್ವರ! ಮುಟ್ಠಾಳ! ಮಾವನ ಮನೇ ಕಡೇ ಸೇರಿಕೊಂಡುಬಿಟ್ಟೆ ಯೇನೋ? ಆಗಲೋ, ಇಲ್ಲ ನಾನು ನಿನ್ನನ್ನ ಸಾಕಿ ಸಲಹಿದೆ. ನನ್ನೇ ಜರೀತೀಯಲ್ಲೋ?

ಈ:- ಅಪ್ಪಾ! ತಡಿಯೋವರೆಗೂ ತಡೆಯಬಹುದು. ಇನ್ನು ನನ್ನಿಂದ ಸಾಧ್ಯವಿಲ್ಲ. ನಿನ್ನ ಮಾತಿಗೆ ಹೆದರಿ ಹೆದರೀ ನಾನೂ ಕೆಟ್ಟೆ. ನನಗೇನು ವಮಾನ್ವಾಗಲಿಲ್ಲವೆ? ನಿನ್ನಿಂದ ನನಗೆ ಮಾನ ನಿಲ್ಲೋಹಾಗಿಲ್ಲ. ಅವತ್ತು ಧಾರೆ ಮಂಟಪದಲ್ಲಿ ನಿನ್ನ ಕುಣಿದಾಟವೋ? ಕೂಗಾಟವೋ? ಬಂದವರೆಲ್ಲ ಗೊಳ್ಳಂತ ನಕ್ಕರು ಬೇಕಾದಷ್ಟು ಬೇಜಾರುಪಟ್ಟು ಕೊಂಡರು. ಅಯ್ಯೋ ಸಾಕಪ್ಪಾ ಸಾಕು.

ಗಂ:— ಲೋ ಈಶ್ವರ! ನಾನು ನಿನ್ನ ತಂದೆ! ಸ್ವಲ್ಪ ಭಯ ಭಕ್ತಿ ಎಲ್ಲಾ ಇರಲೋ ಮಾತಿನಲ್ಲಿ.

ಈ:— ಸಾಕು ಸುಮ್ಮನಿರಪ್ಪಾ! ಭಯವಂತೆ! ಭಕ್ತಿಯಂತೆ! ಭಯ, ಪಾಪಕ್ಕೆ! ಭಕ್ತಿ, ದೇವರಲ್ಲಿ! ನಿನ್ನ ಕಾಟ ವಿಪರೀತವಾಗಿಹೋಯ್ತು. ಬಾಯಿ

ನಲ್ಲೇ ವೇದಾಂತ ನಿಂದು. ಆಚರಣೆ ನೋಡಿದ್ರೆ ಯಾರಿಗಾದ್ರೂ ಎದೆ ಡಬ್ ಅಂತ ಒಡೆದುಹೋಗುತ್ತೆ. ಅಮ್ಮನ್ನ ಹುರಿದು ಬಾಯಲ್ಲಿ ಹಾಕ್ಕೊಂಡೆ. ನಾಗೂ ಕೈಲಿ ದುಡಿಸಿವೇ ದುಡಿಸಿದೆ: ಹಾಗೆ ದುಡಿಸಿದೆ. ಅವಳ ಹಣ ಅಡ್ಡಡ್ಡಲಾಗಿ ನುಂಗಿದೆ. ಮೂರುಹೊತ್ತೂ ಮುದ್ದನ್ನ ಗೋಳು ಹುಯ್ಕೋತೀಯೆ. ಒಡಹುಟ್ಟಿದವಳು–ಸುಬ್ಬು ಅತ್ತೆ–ಹೆಣ್ ಹೆಂಗಸು–ಗತಿಯಿಲ್ಲದವಳು–ಗಂಡಸತ್ತವಳು—"ನಿನ್ನ ಹಣಾ ಎಲ್ಲಾ ಹಾಳಾಯಿತು" ಅಂತ ಹೇಳಿ ಅವಳಿಗೆ ಮೋಸಮಾಡಿದೆ. ಸ್ವಂತ ಬಂಧು–ಗುಂಡೂರಾಯ–ಆತನಿಗೆ ಸಾಲಾಕೊಟ್ಟು–ದಾವಾ ಮಾಡಿ–ಅವ ಮಾನ ಪಡಿಸಿ ಗೋಳಾಡಿಸಿದೆ. ಆತ ಹೋಗಿ ನೇಣು ಹಾಕ್ಕೊಂಡು ಸತ್ತ ಪಾಪ! ಆತನ ಹೆಂಡತಿ ವಿಧವೆಯಾದಳು. ಆತನ ಸಂಸಾರ ಸಂಕಟದಲ್ಲಿ ಸಿಕ್ಕಿ ಶಿಥಿಲವಾಯಿತು. ಆತನ ಹೆಂಡತಿ ಬಂದು ಬೇಡಿ ಕೊಂಡಳು ನಿನ್ನ. ನೀ ಹೇಳಿದೆ "ಕೊಟ್ಟಸಾಲ ವಾಪಸ್ಸು ಕೊಡ ಲಾರದೆ ಹೋದರೆ ನೇಣುಹಾಕ್ಕೊಂಡು ಸಾಯೀಂತ ನಾನು ಹೇಳಿದ್ನೇ" ಅಂತ. ಅಂತೂ ಆಕೆ ಹೊಟ್ಟೆ ತಣ್ಣಗಾಯಿತು. ಅವರ ಜಮೀನು ನಿನಗೆ ಸೇರಿಹೋಯಿತು! ಅಪ್ಪ! ನಿನ್ನ ಆಸ್ತಿಯೆಲ್ಲಾ ರಕ್ತಮಯ ನೋಡು. ಧರ್ಮವಿರುದ್ಧ! ಅನಾಗರಿಕ ಸಂಪಾದನೆ! ಆತ್ಮ ವಿಘಾತಕ! ಕುಲನಾಶಕ!

ಗಂ:—ಅಲ್ಲವೋ ಅಧಿಕಪ್ರಸಂಗಿ! ಅವಿವೇಕಿ! ದುರಹಂಕಾರಿ! ಏನೋ ನಿನ್ನ ಮದ? ಏನೋ ನಿನ್ನ ಪೊಗುರೂಂದೆ? ಅಲ್ಲ, ಇವೆಲ್ಲಾ ಏನೋ ಧೂರ್ತತನಾಂದೆ? ಹಾಂ! ಸಾಕೂಂದೆ!

ಈ:—ಅಯ್ಯೋ, ಸುಮ್ಮನೆ ಇರಪ್ಪಾ! ನಿನ್ನ ಕೂಗಾಟಕ್ಕೆ ಕೊನೆಮೊದಲಿಲ್ಲ. ಇದಕ್ಕೆಲ್ಲಾ ಯಾರು ಹೆದರ್ತಾರೆ? ಅಲ್ಲ, ಹೊಟ್ಟೇಲಿ ಹುಟ್ಟಿದ ಕಂದ! ತಾಯಿ ಸತ್ತ ತಬ್ಬಲಿ! ಆ ಸುಂದರು! ಎಲ್ಲಿ? ಒಂದು ದಿವಸ ಹತ್ತರ ಕರೆದು ಕೂಡಿಸಿಕೊಂಡು ಸಂತೋಷದಿಂದ ಒಂದು ಮಾತು–ಅವ ಳೊಂದಿಗೆ ನೀನಾಡಿದ್ದೀಯಾ? ಶ್ಯಾಮೂ ಮಾವನ್ನ ಸಿಕ್ಕಾಪಟ್ಟೆ ಅಂದೆ. ಸಂಗಪ್ಪನ ಸಾಲಕ್ಕಾಗಿ ಸಾವಿರಸಲ ಶಾಪಕೊಟ್ಟೆ. ಸಿಕ್ಕಿ ಸಿಕ್ಕಿದವ ರನ್ನ ಸಿಕ್ ಸಿಕ್ ಹಾಗೆಲ್ಲಾ ಅಂದೆ. ಮನಬಂದಂತೆ ನೋಯಿಸಿದೆ.

ಇತರರು ಹೇಗಾದರೂ ಕೆಟ್ಟು ಹಾಳಾಗಿ ಹೋಗ್ಲಿ. ಅದರಿಂದ ನಿನ್ನ ಮನಸ್ಸಿಗೆ ಒಂದೆಳ್ಳಷ್ಟು ಯಾತನೆಆಗೋದಿಲ್ಲ. ನಿನ್ನ ದುಡ್ಡು ಹೆಚ್ತಾಯಿದ್ರೆ ಸರಿ. ದುಡ್ಡು ಒಂದರಿಂದಲೇ ನಿನ್ನ ಆತ್ಮಕ್ಕೆ ಶಾಂತಿ!

:—ಅಲ್ಲವೋ, ಬೇಡಾ ಬೇಡಾಂದಷ್ಟೂ—ಹಾಂ ! ಮಿತಿಮಿಂಚಿಹೋಯಿತಲ್ಲೋ ನಿನ್ನ ತಲೇಹರಟೇ ?

ಕಿ:—ತಲೇಹರಟೇನೂ ಇಲ್ಲ, ಗಿಲೇಹರಟೇನೂ ಇಲ್ಲ ಇದ್ದದ್ದನ್ನು ಇದ್ದ ಹಾಗೆ ಹೇಳಿದೆ ಅಷ್ಟೆ. ಹಿತ ಹೇಳಿದರೆ ತಲೆಹರಟೆಯಾಯಿತೋ ನಿನಗೆ? ತನ್ನನ್ನು ಸೇರಿದವರು, ಇಲ್ಲದವರು, ಅನ್ನೋ ಅಭಿಮಾನವೇ ನಿನಗಿಲ್ಲವೋ? ಸುಮ್ಮನೆ ಹೇಳಿಕೊಂಡು ಏನು ಪ್ರಯೋಜನ ? ನಮ್ಮಿಬ್ಬರಿಗೂ ಹೊತ್ತು ಹೋಗಲಲ್ಲ ಅಷ್ಟೇ. ಸದ್ಯದಲ್ಲಿ ನಿನ್ನಹೊರತು ಈ ಮನೇಲಿರೋವ್ರು— ನಾನೊಬ್ಬ—ಹೊಟ್ಟೆಗೆ ತಿನ್ನೋದಕ್ಕೂ ಗತಿಯಿಲ್ಲದೇ ಇರೋವಳು— ಶಾರದೆ ಒಬ್ಬಳು. ನಿನ್ನ ಕಾಟ ತಡೀಲಾರದೆ ಇನ್ನು ನಾವಿಬ್ಬರೂ ಪ್ರಾಣ ಬಿಟ್ಟುಬಿಟ್ಟರೆ—ಅಥವಾ ನಿನ್ನ ಕಣ್ಣಿಗೆ ಕಾಣದೇ ಎಲ್ಲಿಯಾದರೂ ದಿಕ್ಕಿಲ್ಲದ ದೇಶಾಂತರಕ್ಕೆ ಹೋಗಿ ಹಾಳಾದ್ರೆ—ಆಗ ನೀನುಮಟ್ಟಿಗೆ ಈ ಮನೇಲಿ ಕೂತುಕೊಂಡಿರಬಹುದು. ನಿನ್ನ ಜೊತೆ ಜೊತೇಲಿರೋ ಪುಡಿಕಾಸು, ಮೂರು ಕಾಸು, ಆಣೆ, ದೊಡ್ಡಾಣೆ, ಪಾವಲಿ, ರೂಪಾಯಿ—ಎಲ್ಲಾದನ್ನೂ ಏಕಾಂತವಾಗಿ ರಾಶಿ ಹಾಕಿಕ್ಕೊಂಡು—ಬೆಳಗಿನಿಂದ—ಸಂಜೇವರೆಗೂ—ತೊಂದರೆ ಇಲ್ಲದೆ ಎಣಿಸ್ತಾ ಕೂತಿರಬಹುದು. ಆಗಲೇ ನಿನ್ನ ಆತ್ಮಕ್ಕೆ ಶಾಂತಿ ದೊರೀಬೇಕಾದ್ರೆ.

ಗಂ:—ಇದೇನು ಅಧಿಕಪ್ರಸಂಗಾಂದೆ! ಏನೋ ಇದೂಂದೆ! ಅಯ್ಯೋ! ದುರಹಂಕಾರಿ! ದುಷ್ಟ ಮುಂಡೇದೆ! ಒಬ್ಬನೇ ಮಗನಾಗಿ ಹುಟ್ಟಿದ್ದೀಯೋ ನೋಡಿದರೆ ! ಹೀಗೆ ನೆಗೆದುಬಿದ್ದು ಹೋಗೋಂಥಾಬುದ್ಧಿ ಏನು ಹುಟ್ಟಿತೋ ನಿನಗೆ ? ಒಂದು ಸಮಯ ನಾನು ಸತ್ತರೆ, ನನಗೆ ನಿಜವಾಗಿಯೂ ತಿಥಿ, ಕರ್ಮ, ಎಲ್ಲಾ ಮಾಡ್ತೀಯೋನೋ ನೀನು ?

ಕಿ:—ಕೈ ನೀಡಿ ದುಡ್ಡು ಈಗಲೇ ಕೊಟ್ಟಿಟ್ಟಿದ್ದರೆ ನಾನಲ್ಲದಿದ್ದರೆ ಯಾರಾದರೂ ಮಾಡ್ತಾರೆ. ಅದಕ್ಕೆ ಯಾಕಂತೆ ಪೇಚಾಟ ?

ಗಂ:— ನೋಡಿದೆಯಾ ವುತ್ತೆ. ಇದೇನೋ ವಿಪರೀತ ಇದು? ಹಾಂ!

ಈ:—ಅಪ್ಪಾ! ಪರಪೀಡೆಯ ಪ್ರಬಲವಾದ ಪ್ರಸಾದ! ಅಂದೆ. ಸಾಕು! ಸಾಕು! ನಿನ್ನ ಸಂರಕ್ಷಣೆ! ನಾನೂ ಶಾರದೆಯೂ ಹೊರಟೆವು ಇಲ್ಲಿಂದಾಂದೆ

ಗಂ:—ಅಲ್ಲವ್ರೋ, ಈಶ್ವರ! ತಡಿ. ಒಬ್ಬ ಮಗ! ಅಂತೂ ನನ್ನಾಡೋಕ್ಕೆ ನೀನೂ ಆರಂಭಿಸಿಬಿಟ್ಟೆ.

ಈ:—ಸಾಕು. ಒಬ್ಬ ಮಗನ್ನ ಚನ್ನಾಗಿ ಬಾಳಿಸಿದೆ. ಅಲ್ಲ, ಶಾರದೇ ಎಂಟು ದಿವಸದಿಂದ ಹಾಸಿಗೆ ಬಿಟ್ಟು ಏಳಲೇ ಇಲ್ಲ. ಅನ್ನಾಹಾರಗೀಲ್ಲ. ಔಷಧಿ ಮೊದಲೇ ಇಲ್ಲ. ಹೀಗೆ ಸಾಯ್ತಾಬಿದ್ದಿರೋವಾಗ್ಲೂ "ಹೇಗಿದ್ದಾಳೋ ಈಶ್ವರ?" ಅಂತ ಒಂದು ಮಾತು ಕೇಳಿದೆಯಾ? ಕನಿಕರ ಅನ್ನೋದು ಒಂದು ತೊಟ್ಟಿಲ್ಲ ನಿನಗೆ. ಸಾಲದ್ದಕ್ಕೆ ನಿನ್ನೆ ಬೇರೆ ಅಂದೆ "ಶಾರದೆ ಸತ್ತರೆ ಸಾಯಲಿ ಬಿಡೋ, ನನ್ನ ಕೈಯ್ಯಲ್ಲಿ ಹಣ ಇಲ್ಲ–ಖರ್ಚು ಮಾಡೋದಕ್ಕೆ–ಬೇಕಾದ್ರೆ ಅವರಪ್ಪನ ಮನೇವ್ರೇ ಕರೆಯಿಸಲಿ ಡಾಕ್ಟ ರನ್ನ–ಮಹರಾಯರಾಗಿ ಚಿಕಿತ್ಸೆ ಮಾಡಿಸಲಿ–ನನ್ನ ಅಭ್ಯಂತರ ಏನೂ ಇಲ್ಲ" ಅಂದೆ. ಹೂಂ! ಹಣ! ಹಣ! ಹಣ! ನಾವೆಲ್ಲಾ ಸತ್ತು ಹೋದಮೇಲೆ ನಿನ್ನ ಹಣ ಇಟ್ಟುಕೊಂಡು ಅರಿಸಿನ ಕುಂಕುಮ ಹಾಕಿ ದಿನಾ ಹತ್ತುಸಲ ಪೂಜೆಮಾಡು.

ಗಂ:—ಈಶ್ವರಾ! ಅಲ್ಲಾ ಏನೋ ಇದು ತಲೇಹರಟೇ? ಏನು ಅಧಿಕ ಪ್ರಸಂಗಾಂತ? ಮಿತಿ ಮಿಂಚಿಹೋಯಿತಲ್ಲಾ! ಎಲ್ಲಾ ಮಾವನ ಮನೇವ್ರು ಹೇಳಿಕೊಟ್ಟಿದ್ದು! ಬಿ. ಎ., ಪಾಸಾಯ್ತು. ಬೇಸಗೆ ರಜ ಬೇರೆ. ಬರುವ ವರ್ಷತಾನೇನೋ ಬಿ. ಎಲ್., ಗೆ ಓದಬೇಕಾದ್ರೆ. ಎಲ್ಲಾದ್ರೂ ಹೋಗಿ ಮೂರು ತಿಂಗಳು ಕೆಲಸಕ್ಕೆ ಸೇರುಕ್ಕೊಳ್ಳೋ. ಹಾಗೂ ನಾಲ್ಕುಕಾಸು ಸಂಪಾದಿಸಿದರೆ ನಿನಗೆ ಪಾಪ ಸುತ್ತಿಕೊಳ್ಳುತ್ತೆ. ಯೇನೋ? ನನಗೆ ಕೊಡಬೇಡ. ನಿನ್ನ ಹೆಂಡತಿ ಕಾಯಿಲೆ ವಾಸಿ ಮಾಡಿಕೋ ಯಾರು ಬೇಡ ಅಂದವ್ರು. ಶುಂಠಿಯ ಕಷಾಯ ಕುಡಿ ಯುವ್ಯಾ ಶಾರದಾ! ಅಂದೆ ಅವತ್ತು. "ಉಹುಂ! ಒಲ್ಲೆ ಅಂದ್ಲು". ಅವಳ ಹಠ ನೋಡು ನಿಂದಕ್ಕೆ ಹತ್ತರಷ್ಟಿದೆ. ಸಾಸುವೆ ಪಟ್ಟಾದರೂ

ಹಾಕೊಂಡೆ. ಕೇಳ್ತಾಳೆಯೋ ಅವಳು ? ಅಜೀರ್ಣ ಆಗಿರಬಹುದು. ಗಂಜಿನ್ನ ಕುಡಿ ಹೊಂಡೆ. ಕೇಳಿದೆಯಾ ನೀನು! "ಬೇಡಾ ಅಂದೆ" ನೀನೇ ಎಲ್ಲಾ ಬಡ್ಸಿ ಹಾಕ್ತೀ ಮುಕ್ಕಳೀನೋ? ನಿನ್ನಿಷ್ಟ ಕಾಣೋ ಈಶ್ವರ! ಅವನಿಷ್ಟ. ಕಂಡಾಂತು ಹೋಗು ಅವರಪ್ಪನಮನೇಗೆ. ಕಾಯಿಲೆ ವಾಸಿಮಾಡಿಕೊಂಡು ಬೇಕಾದಹಾಗೆ ಬಂದಿರಲಿ ಆಮೇಲೆ ಇಲ್ಲೀ! ಯಾರು ಬೇಡಾಂತಾರು ? ನಂಗೂ ಸಾಕಾಗಿಹೋಗಿದೆ ನೋಡು. ನೀನೂ ಹೋಗಿ ಅಲ್ಲೇ ಇರು. ಒಂದೆರಡು ದಿವ್ಸಾನಾದ್ರೂ ಈತೊಂದ್ರೆ ತಾಪತ್ರಯಗಳಿಲ್ಲದೆ-ನಾನೂ ವಿರಾಮವಾಗಿ ದೇವರಪೂಜೆ ಮಾಡ್ಕೋತೀನಿ ವಿಷ್ಣು ಸಹಸ್ರನಾಮ ಓದುಕೋತೀನಿ. ರಾಮಾಯಣ ಪಾರಾಯಣ ಮಾಡಿಕೋತೀನಿ ನೆಮ್ಮದಿಯಾಗಿ.

ಆಯಿತು. ನಿನಗೆ ಇದು ಬೇರೆ ಕೇಡು! ದೇವರಪೂಜೆ! ಸಹಸ್ರನಾಮ! ರಾಮಾಯಣ! ಎಲ್ಲಾ ಬರೀ ಬೂಟಾಟಿಕೆ! ಅಷ್ಟಲ್ಲದೇನು? ತನ್ನ ಸಂಸಾರ! ತನಗೆ ಸೇರಿದವರು! ಕರುಳಿನ ಸಂಬಂಧ! ಕರುಣೆ! ಉಹುಂ! ನಿನಗೆಲ್ಲಿಂದ ಬರಬೇಕು? ಅವಳಿಗೆ ಮೈಗಾಗೋಲ್ಲ ತಣ್ಣೀರು ಸ್ನಾನ ಅಪ್ಪರ ಬಂದುಬಿಟ್ಟಿದೆ ಅಂತೆ. "ಉಸ್ಸ್ ಇನ್ನೆತ್ತ, ತಣ್ಣೀರಿನಲ್ಲೇ ಸ್ನಾನಮಾಡಲೀ. ಸ್ನಾನವಾದಷ್ಟೆ ಆದಿಗೇ ಮನೇಗೆ ಹೋಗೋದು ಬೇಡಾ"ಂತ ಕೂಗಾಡಿದೆವು, ಸರಿ, ನಿನ್ನ ಬಲವಂತ. ಸನ್ನಿ ಮುಚ್ಚಿಕೊಂಡಿತು. ತಾರಂಗೊಂಡು ತಲೆ. ಅವಳ ಪಾಡು ಹೀಗಾಯಿತಲ್ಲಾಂತ ಹೆತ್ತವರುಗೋಳು ಕಿವಿಲ್ಲಿ ಕೇಳಿಕೊಂಡಿದ್ದಾಗೋದಿಲ್ಲ. ನಿನ್ನ ನೋಡಿದ್ರೆ, "ಹೋಗೋ ಈಶ್ವರ! ಬಾಕಿ ಹಣ ಕೇಳು ನಿನ್ನ ಮಾವನ್ನ! ಬಾಕಿ ಹಣ!" ಅಂತೀಯೆ. ಹೆಂಡತಿ ಸಾಯ್ತಾ ಬಿದ್ದಿರೋದು ಮನೇಲಿ. "ಈಗ ನೀನು ಹೋಗಿ ಸಂಪಾದಿಸಿಕೊಂಡು ಬಾ, ಹೆಂಡತಿಕಾಯಿಲೇನ್ನ ನೀನೇ ಸಂಪಾದಿಸಿ ವಾಸಿಮಾಡಿಕೋ" ಅಂತಿದ್ದೀಯೆ! ಈಗ ಅವ ಸತ್ತಿಬಿಟ್ಟಿದ್ದರೆ! ಹೂಂ! ಅದು ಕೇಳಿಬಾರದ ಪುಣ್ಯ! ಅಯ್ಯೋ, ಅಪ್ಪ! ಅಪ್ಪ! ನಿನ್ನ ಮಗನಾಗಿ ಹುಟ್ಟ್ಯೋ ಗ್ರಹಚಾರ! ಪಾಪಕರ್ಮ! ನನಗೆಲ್ಲಿ ಬಂದು ಬಡೀತೋ? ಅಪ್ಪಾ! ದೇವರೇ!

ದೃಶ್ಯ ೧೨ ] [ ಸ್ಥಾನ : ಬೀದಿ

(ಪಾತ್ರಗಳು : ಈಶ್ವರ್, ಪುರುಷೋತ್ತಮ್)

ಈ:—ಪುರುಷೋತ್ತಮ್ ! ಕ್ಷಮಿಸಯ್ಯಾ. ಈ ಹಾಳು ಮುದುಕನ್ನ ಕಟ್ಟಿ ಕ್ಕೊಂಡು ನಾನು ಕೆಟ್ಟು ಹಾಳಾಗಿ ಹೋದೆನಲ್ಲೋ ಪುರುಷೋತ್ತಮ್! ಬಿಡಿಕಾಸು ಕೈಬಿಟ್ಟು ಕರ್ಚುಮಾಡೋದಿಲ್ಲ. ಪ್ರಾಣಹೋದರೂ ಸರಿ. ಶಾರದೇ ಬಹಳ ಸೀರಿಯಸ್ (Serious) ಕಾಣೋ ಅಪ್ಪ! ನನಗೂ ತಡೀಲಿಲ್ಲ ನೋಡು. ಇನ್ನು ದಾಕ್ಷಿಣ್ಯ ಪ್ರಯೋಜನ ಇಲ್ಲ ಅಂತ ಅಂದುಬಿಟ್ಟೆ ಅಪ್ಪನ್ನ—ಸಿಕ್ಕಾಪಟ್ಟೆ. ಈಗ ನೆನೆಸಿಕೊಂಡರೆ ಯಾತ ಕ್ಕಾದರೂ ಅಂದನೋಂತ ವ್ಯಸನವಾಗತಾ ಇದೆ.

ಪುರು:—ಅದು ಹೋಗಲಿ, ಈಶ್ವರ್! ಈಗ ಕಾಲಹರಣ ಮಾಡುವುದು ಬೇಡ. (Be quick) ಜಾಗ್ರತೆ ಮಾಡು. ನನ್ನಿಂದ ಏನಾಗಬೇಕು? ಹೇಳು.

ಈ:—ಸರಿ, ಅಪ್ಪ ಅಂದ "ಶಾರದೇನ್ನ ಅನರಪ್ಪನ ಮನೇಗೆ ಕರಕೊಂಡ್ಹೋಗು. ಔಷಧಿ ಕೊಡಿಸು. ಗುಣಮಾಡಿಸು. ನೀನೂ ಅಲ್ಲೇ ಹೋಗಿದ್ದುಕೋ-ನನ್ನ ಅಭ್ಯಂತರ ಏನೂ ಇಲ್ಲ" ಅಂತ. ಇನ್ಯಾಕಪ್ಪ ತಡ?

ಪುರು:—ಹಾಗಾದರೆ, ಈಶ್ವರ್! ನೀನು ಹೋಗಿ ಶಾರದೆಬಳಿ ಇರು, ಇದೋ, ಹಿಡಿ. ಈ ಹಣ್ಣು ಆಕೆಗೆ ಕೊಡು. ಡಾಕ್ಟರ್ ಒಂದು ಮಿಕ್ಸ್ಚರ್ (Mixture) ಕೊಟ್ಟಿದ್ದಾರೆ—ಇದನ್ನು ಕುಡಿಸು. (ಎಂದು ಹೇಳಿ ಕೆಲವು ಕಿತ್ತಲೇ ಹಣ್ಣು, ಸೇಬು, ಹಣ್ಣುಗಳನ್ನು, ಔಷಧಿಯನ್ನೂ ಈಶ್ವರನ ಕೈಯಲ್ಲಿ ಕೊಡುತ್ತಾನೆ) ನಾನು ಸೈಕಲ್ ಮೇಲೆ ಹೋಗಿ ಡಾಕ್ಟರ್ ಭಟ್ಟರನ್ನು ನಿಮ್ಮ ಮಾವನ ಮನೇಹತ್ತಿರವೇ ಬರಹೇಳಿ- ಹಾಗೆಯೇ ನಿಮ್ಮ ಮಾವನವರಿಗೆ ಹೇಳಿ ಒಂದು ಟ್ಯಾಕ್ಸಿ (Taxi) ಮಾಡಿ ಶಾರದೆಯನ್ನು ಅವರ ಮನೆಗೆ ಕರೆದುಕೊಂಡು ಹೋಗುವಂತೆ ಏರ್ಪಾಡು ಮಾಡುತ್ತೇನೆ. ನಾನೂ ಅಲ್ಲೇ ಬಂದು ಸೇರುತ್ತೇನೆ. ನೀನು ಯೋಚಿಸಬೇಡ ನಡಿ.

ಈ:—ಜಾಗ್ರತೆ ಮಾಡಯ್ಯಾ, ಪುರುಷೋತ್ತಮ್!(The Matter Seems to be serious) ಪ್ರಸಂಗ ಬಹಳ ಕಠಿಣವಾಗಿ ತೋರುತ್ತಿದೆಯಪ್ಪಾ!

ಪು:—Don't worry, my dear boy; you had better get along. I Shall attend to my portion. ಹೂಂ! ನಡಿಯಪ್ಪ.

ದೃಶ್ಯ : ೧೩ ] [ ಸ್ಥಾನ : ಬೀದಿ

(ಪ್ರವೇಶ : ಶ್ಯಾಮರಾಯ)

ಶ್ಯಾಮ :—(ಸ್ವಗತ) ಮುದುಕನ ದುರಾಶೆಗೆ ಮಣ್ಣುಬಿತ್ತು. ನರಹರಿಶಾಸ್ತ್ರಿಗಳಿಗೆ ಗಂಡುಮಗುವು ಹುಟ್ಟಿತು. ಅವರ ಆಸ್ತಿಗೆ ಹಕ್ಕು ಒದಗಿತು. ಈ ಮುದುಕನ ಬಾಯಲ್ಲಿ ಮಣ್ಣು. ನೆಗೆದು ಬಿದ್ದುಹೋಗಲಿ! ಇವನ ದುರಾಶೆಗೆ ಬೆಂಕಿ ಬೀಳ! ಯಾವಾಗ ನೋಡ್ಲಿ, ದುಡ್ಡು! ದುಡ್ಡು! ಇತರರು ಎಷ್ಟೇ ಕೆಟ್ಟು ಹಾಳಾಗಿ ಹೋಗಲಿ. ಇವನಿಗೊಂದಿಷ್ಟು ಕನಿಕರ ಹುಟ್ಟೋದಿಲ್ಲ. ಕಷ್ಟಪಡೋವರ ಕಷ್ಟಾನ್ನ ಹೆಚ್ಚಿಸುತ್ತಾನೆಯೇ ಹೊರತು ಅವರನ್ನ ನೋಡಿ ಒಂದು ದಿನವಾಗಲಿ ಇವನ ಬಾಯಲ್ಲಿ ಅಯ್ಯೋ! ಅಂತ ಒಂದು ಮಾತು ಬಂದಿದ್ರೆ ಇವನು ಮನುಷ್ಯ ಜಾತೀಗೆ ಸೇರಿದವನೇ ಸರಿ! ಹೂಂ! ಕರ್ಮ! ಬಿಟ್ಟೇನೇ?

ಹೀಗೆಲ್ಲಾ ಬಾಯಿಬಡಿದೂ ಬಡಿದೂ ಗುಡ್ಡೇ ಸೇರಿಸ್ತಾನೆ. ತನ್ನ ಹೊಟ್ಟೇಗೆ ತಿನ್ನೋದಿಲ್ಲ! ಹೊಟ್ಟೇಲಿ ಹುಟ್ಟಿದ ಮಕ್ಕಳಿಗೂ ಇಲ್ಲ! ಹೊರಗಿನವರ ಮಾತು ಮೊದಲೇ ಇಲ್ಲ! ಯಾರೋ ಹುಟ್ಟಿದ್ದಾರೆ ಇವನಿಗೂ ವಾರಸ್ಸು! "ಪಾಪಿ ಸಂಪಾದಿಸಿದ್ದು ಪರರಪಾಲು" ಅಂತ. ಒಂದು ಜೀವಮಾನವೆಲ್ಲಾ ಸಂಪಾದಿಸಿದ್ದು–ಶೇಖರಿಸಿದ್ದು–ಒಂದರಘಳಿಗೇಲಿ ನೆಲಮಟ್ಟ ಮಾಡಿಬಿಡ್ತಾರೆ ಯಾರಾದರೂ! ಇಂಥಾ ಹೃದಯವಿಲ್ಲದ ಜಿಪುಣರಿಗೆಲ್ಲಾ ಹೀಗೇ ಆಗೋದು. "ಸೇರಿಸಲಿ, ಸೇರಿಸಲಿ, ಕೊಬ್ಬಲಿ!" ಅಂತ ಇದ್ದಾನೆ ದೇವರು!

ಅಷ್ಟಲ್ಲದೇನು? ಬಾಯಿನಲ್ಲಿ ಮಾತ್ರ ವೇದಾಂತ. ತಿರುಪತಿಗೆ ಬಾ ಅಂತ ಕರೆದ. ಆಮೇಲೆ ಅಂದ. "ಯಾತ್ರೆ ಖರ್ಚು ಇಷ್ಟಾಯಿತು.

ನಿನ್ನ ಭಾಗದ ಬಾಕಿ! ಅದಕ್ಕೆ ಬಡ್ಡಿ ಇಷ್ಟಾಗಿದೆ! ಈಗ ಕೊಟ್ಟು ಬಿಡು. ಮಗನ ಮದುವೆ. ವಿಧಿಯಿಲ್ಲ!'' ಅಂದ ಅಕ್ಕಸಿದ್ದಾಗ ಗೋಳಾಡಿಸಿದ. ಚರ್ಮ ಸುಲಿದ. ಕೊನೆಗೆ ಸಾಯೋವಾಗ ಅವಳಿದ್ದು ಕೊಂಡು "ಎರಡು ಕಿತ್ತಲೇಹಣ್ಣು ತಂದು ಕೊಡಿ'' ಅಂದರೆ "ಶೀತ ಆಗುತ್ತೆ, ಬೇಡ'' ಅಂದ. ಒಂದು ಸಾಧು ಪ್ರಾಣಿ! ಕೈಹಿಡಿದ ಹೆಂಡತಿ! ಚಿನ್ನದಂಥ ಹೆಂಗಸು! ಈ ಮಧ್ಯೆ ತನ್ನ ಮಗಳು! ಆ ಸುಂದರಿ! ಬಡವಾಗಿ ಹೋಗಿದೆ ಪಾಪ! ಹೊರಗಿನವರಿಗೆ ಕೊಡದೆ ಹೋದ್ರೆ ಹೋಗಲಿ ಹೊಟ್ಟೇಲಿ ಹುಟ್ಟಿದ ಮಕ್ಕಳಿಗಾದ್ರೂ ನೆಟ್ಟಗೆ ನೋಡ್ಕೋ ತಾನೆಯೋ? ಉಹುಂ! ಕರ್ಮಿಷ್ಟ ಮುಂಡೇದು! ನಾಯಿ ಜನ್ಮಾನೇ ಇವಕ್ಕೆ ಮುಂದೆ ದೊರಕೋದು!

ಈ ಮಧ್ಯೆ ಪಾಪ! ಈಶ್ವರನ ಹೆಂಡತಿ! ಶಾರದೆ! ಅವಳು ಸಕತ್ತು ಕಾಯಿಲೆ. ಮನೇಲಿ ಹೆಣ್ಣು ದಿಕ್ಕಿಲ್ಲ ದುಡಿಸಿದ, ದುಡಿಸಿದ, ಹಾಗೆ ದುಡಿಸಿದ ಆ ಸಾಗೂಕ್ಕೈಲಿ ಪಾಪ! ಅವಳ ಹಣಕ್ಕೆ ಮೋಸಮಾಡಿ ಅವಳನ್ನು ಓಡಿಸಿದ ಮನೆಬಿಟ್ಟು. ಶಾರದೇನ್ನ ನೋಡ್ಕೋದ್ರು ಯಾರು? ಒಳ್ಳೆ ಹುಡುಗಿ ಪಾಪ! ನರಸರಿಶಾಸ್ತ್ರಿಗಳೂ ಅಷ್ಟೆ! ಹಣವಂತರಾದರೂ ಎಷ್ಟು ಗುಣವಂತರೂಂತ? ಅಂಥ ಆಚಾರ! ಅಂಥ ಮರ್ಯಾದೆ! ಅದನ್ನೆಲ್ಲಾ ನೋಡಿಯಾದ್ರೂ ಕಲಿತ್ಕೋ ಬಾರದೆ ಈ ಹಾಳು ಮುದುಕ? ಈಶ್ವರನ ಗುಣ ಎಲ್ಲಿ? ಇವನ ಗುಣ ಎಲ್ಲಿ? ಈಶ್ವರ ಬೋ ಒಳ್ಳೇ ಹುಡುಗ ಪಾಪ! ಪರಮ ಸಾಧು! ಅವರಪ್ಪನಹಾಗೆ. ಒಳ್ಳೇದಕ್ಕೆ ಹೊಡೆದಾಡ್ತಾನೆ. ಅವನಿಗೆ ಬರಬಾರದ ಕಷ್ಟ ಮೇಲೆ ಮೇಲೆ! ಮದುವೆನೋಡಿದ್ರೆ ಅಮಂಗಳ! ಅಮಂಗಳ! ಮೊದಲಿಂದ ಕೊನೇ ವರೆಗೂ ಅಮಂಗಳ ಮಾಡಿ ಹಾಕಿಬಿಟ್ಟ ಮುದುಕ! ಹೂಂ! ಇನ್ನು ನಾನು ಹೋಗಿ ಶಾರದೇನ್ನ ನೋಡ್ಕೊಂಡು ಬರ್ತೇನೆ ಹೇಗಿದ್ದಾಳೋ ಪಾಪ! ಈಶ್ವರನ ತಲೇಲಿ ಏನೇನು ಬರೆದಿದೆಯೋ ಪಾಪ! ಅಂತೂ ಸಣ್ಣ ವಯಸ್ಸಿನಲ್ಲಿಯೇ ಬೋ ಅನುಭವಿಸಿಬಿಟ್ಟ! ಪ್ರತ್ಯಕ್ಷ ನರಕವಾಸ ಅವನಿಗಿಲ್ಲೇ ಆಗಿಹೋಯಿತು!

ದೃಶ್ಯ ೧೪ ]  [ ಸ್ಥಾನ: ಗಂಗಾಧರನ ಮನೆ.

[ ಪಾತ್ರಗಳು: ಗಂಗಾಧರ, ಮುದ್ದ, [illegible] ]

ಗಂ:—(ಸ್ವಗತ). ಈಶ್ವರ ಹೇಳೋದೆಲ್ಲಾ ಸುಳ್ಳಲ್ಲ! ಆದರೆ? ಆದರೆ? ಸರಿ, ಸರಿ! ಹೂಂ! ಇವನ ಹಾಗೆ ಇದ್ದುಬಿಟ್ಟರೆ ಸರಿ. ಮನೆಯೇ ಚೊಕ್ಕಟವಾಗಿ ಹೋಗುತ್ತೆ ಆಮೇಲೆ. ಅವನ ಮಾತ್ಯಾಕೆ? ಶಾರದೇನ್ನ ಕರಕೊಂಡು ನಡೆದ. ವಾಸುವನ ಮನೇಗೆ. ಹಾಕಲಿ ಅಳಿಯ ಮಗಳಿಗೆ ಅನ್ನಾನ! ಹಾಂ! ನಾಗೂನೂ ಹೊರಟುಹೋದಳು! ಹೂಂ! ಹೋದರೆ ಹೋಗ್ತಾಳೆ! ಏನು ಪ್ರಮಾದ ಕೊಳ್ಳೆಹೋದದ್ದು? ಒಂದಷ್ಟು ಅವಲಕ್ಕಿ ತರಿಸಿ ಮೊಸರಿನಲ್ಲಿ ಹಾಕಿ ಎರಡು ಉಪ್ಪಿನಕಲ್ಲು ಹಾಕಿಕೊಂಡೇ ತಿಂದ್ಬಿಟ್ರೆ ತೀರಿತು ನನ್ನ ಊಟ! ಅದೂ ಅಲ್ಲದೆ, ಈಚೆಗೆ ಊಟಾನೆ ಸೇರೋಲ್ಲ ನನಗೆ! ಹಾಂ! ಚಿಂತೆ ಹೆಚ್ಚಿಹೋಯಿತು. ಹಾಳು ಜನ್ಮಕ್ಕೆ! ನನ್ನ ಯೋಚನೆಯೇ ಒಂದು. ಆದಾಗೋದೇ ಒಂದು. ನರಹರಿಶಾಸ್ತ್ರಿಗಳ ಆಸ್ತಿಯೆಲ್ಲಾ ನನಗೇ ಸೇರುತ್ತೇಂತ ಈಶ್ವರನ ಮದುವೇಗೆ ಇಷ್ಟು ಪ್ರಯತ್ನ ಮಾಡಿ ಸತ್ತೆ. ಅಯ್ಯೋ! ನನ್ನ ಅದೃಷ್ಟವೆ! ಅಲ್ಲ! ನರಹರಿಶಾಸ್ತ್ರಿಗಳಿಗೆ ಈಗಲೇ ಹುಟ್ಟಬೇಕಾಗಿತ್ತೇ ಗಂಡುಮಗು! ಹಾಂ! ಆ ಸತ್ತ ಕೂಡ ಹೇಳಿದ್ರಲ್ಲಾ ಶಾಸ್ತ್ರಿಗಳೂ! "ಇನ್ನು ಗಂಡುಮಗೂನ್ನ ಪಡೆಯೋ ಪ್ರಾಪ್ತಿ ನಮಗೆಲ್ಲಿಂದ ಬರಬೇಕು? ಹೇಗೂ ಶಾರದೆ ಹೊಟ್ಟೇಲ್ಲಿಯಾದ್ರೂ ಒಂದು ಗಂಡುಮಗು ಹುಟ್ಟಿತೂಂದ್ರೆ ನಮ್ಮ ಮನಸ್ಸು ಅಷ್ಟು ಶಾಂತವಾಗುತ್ತೆ ನೋಡಿ" ಅಂತಂದ್ರಲ್ಲಾ! ಈ ಹುಡುಗ ಹುಟ್ಟಿ ನನ್ನ ಆಸೇನ್ನೆಲ್ಲಾ ಪಾತಾಳಕ್ಕೆ ತಳ್ಳಿದನಲ್ಲಾ! ಹಾಂ! ಇನ್ನು ಆ ಶಾರದೇ ಬೇರೆ! ಆಸ್ತಿ ಹೋದಮೇಲೆ ಶಾರದೇನ್ನ ಕಟ್ಟಿಕೊಂಡು ಅಳೋದ್ಯಾಕಂತೆ? ಇದ್ದರೆ ಇರಲಿ. ಸತ್ತರೆ ಸಾಯಲಿ!

[ ಪ್ರವೇಶ: ಮುದ್ದ, ಘಾಬರಿಯಿಂದ ]

ಮು:—ಬುದ್ಧಿ! ಬುದ್ಧಿ! ಅಸಾ ಎಲ್ಲಿ ಬುದ್ಧಿ?

ಗಂ:—ಏನೋ ಮುದ್ದ! ಏನೂ ಹಾಗಂದರೇ? ಹಾಂ! ನನ್ನ ಕೇಳ್ತೀಯಲ್ಲೋ? ಕೊಟ್ಟಿಗೇಲ್ಲಲ್ಲವೇನೋ?

ಮು:—ಇಲ್ಲಾ ಬುದ್ಧಿ! ರಾತ್ರೆ ಆಕ್‌ಬುಟ್ ಓದ ಉಲ್ಲು ಅಂಗೇ ಬುದ್ದೈತೆ ಬುದ್ದಿ! ಮೇಯನೇ ಇಲ್ಲ. ಒತ್ತನಂತೆ ಬಂದೋವ್ನು ಗಂಜಲ ಗಿಂಜಲ ಬಳಿಯೆಂಣನಾಂತ ಓಗಿ ನೋಡಿದ್ರೇ ಅಸಾನೂ ಇಲ್ಲ! ಕರಾನೂ ಇಲ್ಲ! "ಮಳಬಂದು ಉಲ್ಲು ಉಟ್ಟೈತಲ್ಲಾ, ಮನೆಯಾಗ್ ಯಾಕ್ ಉಲ್ಲಿನ ಕರ್ಸು? ಒಲತಾಕ್ ಓಗಿ ಮೇಯ್‌ಕೊಂಡ್ ಬರ್ಲಿ" ಅಂತ ಬಿಚ್‌ಬುಟ್ರೇ ನೋಂತ ಕೇಳ್ದೆ ಬುದ್ಧಿ!

ಗಂ:—ನೋಡೋ, ಅಚೇಈಚೇ! ನಾನು ಬಿಚ್ಚಿಬಿಡಲಿಲ್ಲವೋ ಮುದ್ದಾ! ಹಸು ತಂಟೀಗೆ ಹೋಗಲಿಲ್ಲವೋ ನಾನು? ಇದೇನು ಗತಿ ಬಂತಪ್ಪಾ ನನಿಗೆ ದೇವರೇ!

ಮು:—ಎಲ್ಲಾ ನೋಡ್‌ಬುಟ್ಟು ಬಂದೇ ಬುದ್ಧಿ! ಎಲ್ಲೂ ಕಾಣಾಕಿಲ್ಲ.

ಗಂ:—ಹಾಗಾದ್ರೆ ಕಳವಾಗಿ ಹೋಯಿತೇನೋ? ಹಸು ಕರು ಕಳವಾಗಿ ಹೋಗಿಬಿಡತೇನೋ? ನಾನು ಕೆಟ್ಟುಹೋದನಲ್ಲೋ ಮುದ್ದ! ಸರಿಯಾಗಿ ನೋಡೋ ಮುದ್ದ!

ಮು:—ಎಲ್ಲಾ ನೋಡ್ದೆ ಬುದ್ಧಿ! ನೀವೇ ಓಗಿ ನೋಡಿ ಬುದ್ಧಿ ಬೇಕಾದ್ರೆ, ನನ್ನ ಕೈಲಾಗಾಕಿಲ್ಲ ಇನ್ನು.

ಗಂ:—ಇದೇನೋ ಮುದ್ದ ಹಾಗಾದ್ರೆ? ಇದೇನೂಂತ? ಇದು ಯಾರ ಕೆಲಸಾಂತ? ಹಸು ಕರು ಹೀಗೆ ಕಳುವಾಗಿ ಹೋಗೂದೂಂದ್ರೆ ಏನೂಂತ? ನಿಂತ ಸ್ಥಳದಲ್ಲೇ ಹಾಗೇ ಮಾಯವಾಗೋದೂಂದ್ರೆ ಇದೇನು ವಿಚಿತ್ರಾಂತ?

ಮು:—ನಂಗೊತ್ತಿಲ್ಲಾ ಬುದ್ಧಿ! ಅದೆಲ್ಲಾ.

ಗಂ:—ಹಾಗಾದ್ರೆ ಏನು ಅರ್ಥ ಮುದ್ದ? ನೋಡು, ನಿನ್ನನ್ನಾ ಪೋಲೀಸಿಗೆ ಕೊಟ್ಟುಬಿಡ್ತೀನಿ. ಚರ್ಮ ಸುಲಿಸ್‌ಬಿಡ್ತೀನಿ. ನೀನೇ ಒಳಸಂಚು ನಡಿಸಿದ್ದೀಯಾ! ಯಾರಿಗೋ ಬಿಚ್ಚಿಕೊಟ್ಟುಬಿಟ್ಟಿದ್ದೀಯಾ! ಸಂಬಳಬೇರೆ ಸಾಲ್ದು ಸಾಲ್ದು ಅಂತ ಅಂತಿದ್ದೆ-ನೀನು ಮಾಡೋ ದಿವ್ಯವಾದ ಕೆಲಸಕ್ಕೆ! ಹಸತಂದು ಮೊದಲು ಕೊಟ್ಟಿಗೇಲಿ ಕಟ್ಟು. ಇಲ್ಲದೇ ಇದ್ರೆ...........

ಮು:—ಬುದ್ಧೀ ! ನಾನ್ ಇಡುಕೊಂಡೋಗಿ ಕಟ್‌ಕೊಂಡೀವ್ನ ಮನೆಯಾಗೆ? ಇವೇನ್ಬುದ್ಧಿ ? ಕಾಲಾಂತರದಿಂದಾ ಇಲ್ಲದ ಕಳ್‌ತಾನಾ ಬೇರೇ ಕಟ್ತಿದ್ದೀರಿ ತಲೇಮ್ಯೇಕ್ಕೆ ? ಸರಿಯಾಯ್ತು ಬುಡ್ರಿ ಆತ್ತಾಗೆ! ಆವತ್ತು ಬೇರ ಅಂದ್ರಿ. "ದೋತ್ರಾ ಕದ್ದೆಯೇನೋ ಮುದ್ದ ?" ಅಂತ. ಸಾಕು ನಸುಪ್ಪೋರಾ! ಸಾಕು! ನಿಮ್ಮ ಸಾಕರೀ ಸಾಕೀಸಟ್ಟು! ನನ್ನ ಸಂಬಳಾ ಕೊಟ್‌ಬುಡ್ರಿ ಅತ್ತಾಗೆ-ನಾ ಒಂಟೋಯ್ತೀನಿ. ನಿಮ್‌ತೆಪ್ ಸಾವಾಸ ಬೇಡ! ಕೊಟ್ಬುಡೀ ಬುದ್ಧಿ! ಸಂಬಳಾವಾ! ನಾನಾಳಾಗಿ ಓಯ್ತೀನಿ. ಇದ್ಯಾಕಾಬುದ್ಧಿ! ಇಂಗೆ ನೋಡ್ತಿದ್ದೀರೀ? ನಿಮ್ಮ ಗಂಟ್ನೆಲ್ಲಾ ನುಂಗಾಕಿ ಬುಟ್ಟೀವ್ನ ನಾನಂಗಾರೆ?

ಗಂ:—ಮುದ್ದ ! ಸ್ವಲ್ಪ ಬಾಯಿ ಬಿಗಿಹಿಡಿದು ಮಾತಾಡೋ ಮುಟ್ಠಾಳ!

ಮು:— ಆಗ್‌ಬೋದೂ ಬುದ್ಧಿ !

ಗಂ:—ಹಸೂ ಹೋಯಿತಲ್ಲಾ, ಕರುಹೋಯಿತಲ್ಲಾಂತ ನನ್ನ ಒದ್ದಾಟ ನನಿಗೆ. ಇವನಿಗೆ ಸಂಬಳ ಕೊಡಬೇಕಂತೆ ಸಂಬಳ! ಕೊಟ್‌ಬಿಡ್ತೀನಿ ನೋಡು ಪೋಲೀಸ್ ಸ್ಟೇಷನ್ನಿಗೆ ನಿನ್ನಾ! ಉಷಾರ್! ಕಳ್ಳಮುಂಡೇದೇ!

ಮು:—ಅಂಗಾರಾ ಮಾಡಿ ನನ್ನೊಡೆಯಾ! ಏನೋ ನಿಮ್‌ತಾವಾ ನಾನೂ ದುಡಿದೆ-ಒಂದಲ್ಲ ಏಡಲ್ಲ, ಅದಿನಾಲ್ಕು ವರುಸಾ ದುಡಿದದ್ದಕ್ಕೆ ಅಷ್ಟಾರಾ ಮಾಡಿ ನಮ್ಮಪ್ಪ!

ಗಂ:—ನೋಡಿದೆಯಾ ನಿನ್ನಹರಟೆ? ಎಷ್ಟೋ ಗುಂಡಿಗೆ ನಿನಗೆ? ಮಾತ್ಮಾತಿಗೆ ಜವಾಬು ಹೇಳ್ತಿಯಾ? ಮಾನಮರ್ಯಾದೆ ಇಲ್ಲವೇನೋ ನಿನಗೆ? ಅಲ್ಲ, ಆಳೂ, ಯಜಮಾನಾಂದ್ರೆ ಹೀಗೇನೇ ಪ್ರಪಂಚದಲ್ಲಿ? ಅಲ್ಲಕಾಣೋ ಹಸೂಂತ ಒಂದು ಕಳೆದುಹೋಗೂದೂ ಅಂದ್ರೇನು? ಎಲ್ಲಿಯಾದ್ರೂ ಹೋಗಿ ಪತ್ತೆಮಾಡೋದು ಬಿಟ್ಟು ಬಿಟ್ಟು ಹರಟತಾನೆ. ದುಡಿದನಂತೆ-ದುಡಿಯೋದಿಕ್ಕೇನೋ ಕತ್ತೇನೂ ದುಡಿಯಿತ್ತೆ!

ಮು:—ನಿಮ್ ತಾವಾ ಕೆಲಸಕ್ಕೆ ಸೇರಿದೋನು ಕತ್ತೆಅಲ್ಲದೆ ಇನ್ನೇನುಬುದ್ಧಿ? ಅದಕ್ಕೂ ಕಡೇಂತಲೇ ನಾನ್ ತಿಳುಕೊಂಡಿರೋದು.

ಗಂ:—ಹಾಂ! ಹೇಳ್ ಹೇಳ್ತಾ ಆರಂಭಿಸಿದೆಯಲ್ಲಾ ಮತ್ತೆ? ಅಪ್ರಯೋಜಕ!

ಮು:—ಬುದ್ಧಿ! ಬೇಕು ಬೇಕಾದೋವರನ್ನ ಕತ್ತು ಹಿಸುಕಿ ತಿಪ್ಪೇಗುಂಡೀಲಿ ಹಾಕ್ಬುಟ್ರಿ. ಇನ್ನ ನಾನೊಬ್ಬನಿದ್ನೆ. ಬೊಂತನ. ನನ್ನ ಇಡಿದು ಸಿಗಿದಾಕ್ ಬುಡೀ ಅತ್ಲಾಗೆ. ನನ್ಹೆಂಡ್ರು ಗತಿಗೆಟ್ಟು ಓಗಲಿ. ನನ್ನ ಮಕ್ಕಳು ಬೀದಿ ಬೀದೀಲಿ ಅಲೀಲಿ. ಆಗ ತೃಪ್ತಿಯಾಗೋಗ್ತೈತೆ ನಿಮ್ ಆತುಮಕ್ಕೆ! ಸರಿ ಬುಡೀ! ನಾ ಹೋಗ್ತೀನಿ ಈಸಟ್ಟು. ನಾಳೇ ಬತ್ತೀನಿ. ಸಂಬಳ ಮಡಗ್ಬುಡಿ. ಏನಾಯ್ತದೋ ಲೆಕ್ಕ ಆಕಿ. ನಿಮ್ ದಾಯಿಮೆ ಗೇಯ್ದ್ಬಿ ನಾಕೇಳಾಂಗಿಲ್ಲ. ಮನೇಲಿ ಎಂಡ್ರು ಮಕ್ಕಳು ಒಟ್ಟೆಗಿಲ್ದೆ ಉಪಾಸಾ ಸಾಯ್ತಾ ಅವ್ರೆ. ನಿಮ್ ತಾವಾ ನಾಕ್ರೀಲಿ ಇಪ್ಪೀಂದ್ರೇ ಸಾಲಾಕೂಡ ಕೊಡಾಕಿಲ್ಲ ಯಾರೂನೂವೆ. ನಾಕರಿಯೂ ಸಾಕು ಸಂಬಳಾನೂ ಸಾಕು! ಕಳ್ಳನಂತೆ ಕಳ್ಳ! ಕಳ್ಳರಿಗೆ ಪಾಟಾ ಓದಿಸೋವ್ರು ತಾವು! (ಹೊರಡುವನು).

ಗಂ:—ಮುದ್ದ! ಮುದ್ದ! ಇಲ್ಲಿ ಬಾರೋ, ಮುದ್ದ!.... .... .....

ಮು.—(ಹೋಗುತ್ತಲೇ) ಮುದ್ದ ಸಿಂಭಾಗಕ್ಕ ಸತ್ತೋದ ಓಗ್ರಿ! ಮುದ್ದ! ಮುದ್ದನಂತೆ! ಮುದ್ದನಾದೊತ್ತಿಗೆ ಈಟ್ ದಿವಸ ನಿಮ್ ತಾವಾ ಎಸರೇಳಿದ? ಇನ್ನ್ಯಾರಾರಾ ಆಗಿದ್ರೆ-ಆಗ ತಿಳಿಯೋದು (ಅಂದುಕೊಂಡೇ ಮುದ್ದನು ಹೋಗುವನು)

ಗಂ:—(ಸ್ವಗತ) ಹಾಂ! ಮುದ್ದನೂ ಹೋದ। ನಾಗೂ ಹೋದಳು! ಸುಂದರೂ ಹೋದಳು! ಶಾರದೇ ನಡೆದುಬಿಟ್ಳು ಈಶ್ವರನನ್ನ ಕರೆಕೊಂಡು. ಉಳಿದಿದ್ದವನೊಬ್ಬ ಮುದ್ದ! ಅವನೂ ನಡೆದ ಆಚೇಗೆ. ಮನೆ ಬರಿದಾಯಿತು! ಅಂದಹಾಗೆ ಹಸೂ ಹೋಯಿತು! ಕರೂ ಹೋಯಿತು! ನಾನೊಬ್ಬನೇ ಉಳಕೊಂಡೆ! ಹಾ! ಪಿಶಾಚಿಹಾಗೆ ಮನೇಲ್ಲಿ ಒಬ್ಬನೇ ಹೇಗಿರೋದೂಂತ? ಇದೇ ಸರಿಯಾದ ಸಮಯಾಂತ ಯಾರಾದ್ರೂ ಕಳ್ಳರು ನುಗ್ಗಿಬಿಟ್ರೇ ಏನುಗತಿ? ಹೂಂ! ಎಲ್ಲಾ ಬರೀ ಭ್ರಾಂತಿ! ಇರಲಿ.

ಅಲ್ಲ, ಸುಮ್ಮನೇ ತರ್ಕ ಮಾಡತಾ ಇವ್ರೆ, ಕಳವಾಗಿ ಹೋದ ಪಸು ಕರು ಬಂದಹಾಗೆ ಆಯಿತೇ ? ಹಾಂ ! ಮನೇಬಿಟ್ಟು ಹೋದ್ರೆ–ಇರೋದ ನ್ನೆಲ್ಲಾ ಯಾರಾದರೂ ಹೊಡೆದುಬಿಟ್ರೆ ಆಗೇನು ಮಾಡುವುದು ? ಹಸೂ ಜೊತೇಲಿ ಹಣಾನೂ ಹೋದ್ರೆ ? ಅಯ್ಯೋ ದೇವ್ರೇ ! ಬೀದೀಲ್ಲಿ ಯಾರಾದ್ರೂ ಹೋಗ್ತಾರೇನೋ ನೋಡೋಣ ! ಹಸೂನ್ನೂ, ಕರೂನ್ನೂ ಕಳೆದುಕೊಳ್ಳೋಕ್ಕಾಗತ್ತಯೆ ಹಾಗಾದ್ರೆ ? ಪೋಲೀಸಿನವರಿಗೆ ಹೇಳಿ ಕಳುಹಿಸಬೇಕು. ಹಸು ಪತ್ತೆ ಮಾಡಿಕೊಡೀಂತ ! ಕಂದಾಯ ತಕ್ಕೊಳ್ಳೋಲ್ವೆ ಸರ್ಕಾರದವರು ಯಾರ ಧರ್ಮಕ್ಕೆ ಪತ್ತೆಮಾಡಿಕೊಡ್ತಾರೇಂತ ? ಅಲ್ಲ, ಈ ಹಗಲ ಕಳ್ಳತನಾಂದ್ರೆ ಇದೇನೂಂತ ? ನ್ಯಾಯಾನ್ನೋದು ನೆಲಕ್ಕುರಿಳಿಹೋಯಿತೇ ಆದರೇ ? ಅಲ್ಲ ! ಇಂತಾ ಕಳ್ಳತನಾಂದ್ರೆ ಯಾರಿಗೆತಾನೆ ಎದೇ ಒಡೆದುಹೋಗೋಲ್ಲಾಂತ ? ಅದಲ್ಲಾ. ನನ್ನ ಮನೇಲಿ ಕಳ್ಳತನ ಅಂದ್ರೆ ! ಕಣ್ಣುಮೇಲೆ ಕಣ್ಣಿಟ್ಟು ನೋಡ್ಕೋತೀನಿ–ಅಷ್ಟು ಹುಷಾರಾಗಿ–ಹಾಗಿದ್ರೂ ಕಳ್ಳತನಾಂದ್ರೆ ? ಅಯ್ಯೋ ದೇವ್ರೇ ? ಹಾಗಾದ್ರೆ ನಿನಗೇನು ಕಣ್ಣಿಲ್ಲವೇಂತ ? ದಿನಾ ನಿನ್ನ ಪೂಜೆ ಮಾಡಿದ್ದಕ್ಕೆ ಬೋ ಸಾರ್ಥಕವಾಯಿತು ! ಬೋ ಸಾರ್ಥಕವಾಯಿತು !

(ತೆರೆ ಬೀಳುವುದು. ಗಂಗಾಧರನು ಬೀದಿಗೆ ಬರುವನು)

ಅಲ್ಲ ಯಾರಿಗೆ ಹೇಳಲಿ ? ಯಾರು ನನ್ನ ಮಾತು ಕೇಳ್ತಾರೇಂತ ? ಎಲ್ಲರೂ ನನ್ನ ಮೇಲೆ ಉರಿದೂ ಉರಿದೂ ಬೀಳ್ತಾರೆ ! ಒಬ್ಬರಿಗಾದ್ರೂ ನನ್ನಕಂಡರೆ ಮರ್ಯಾದೆ ಬೇಡವೇಂತ ! ಅಲ್ಲ, ಎಷ್ಟು ಜೋಪಾನ ದಿಂದ, ಇಷ್ಟು ಹಣ ಸೇರಿಸಿದೆನಲ್ಲಾ ನಾನು ? ನನ್ನೋಡಿ ಬುದ್ಧಿ ಕಲಿತು ಕೊಳ್ಳೋದು ! ಬಿಟ್ಟು ಬಿಟ್ಟು ನನ್ನ ಹೀಯ್ಯಾಳಿಸೋವಕ್ಕೆ ಆರಂಭಿಸಿ ಕೊಂಡವಲ್ಲಾ–ಇವೆಲ್ಲಾ ! ಇವಕ್ಕೆ ಯಾವಗತೀಂತ ? ಹಾಗಾದರೆ ನಾನೇನು ಬುದ್ಧಿಯಿಲ್ಲದವನೂಂತ ತಿಳಿಕೊಂಡು ಬಿಟ್ಟವೆಯೇನೋ ಎಲ್ಲಾ ಒಟ್ಟಿಗೆ ಸೇರಿಕೊಂಡು. ಈ ಪರದೇಶಿ ಮುಂಡೇವಲ್ಲ ನನ್ನಮೇಲೆ ಪಿತೂರಿ ನಡಿಸ್ತಾ ಇವೇಂತ ಕಾಣುತ್ತೆ ಹಾಗೇ ನೋಡಿದ್ರೆ !

[ಆವೇಳೆಗೆ ಬೀದಿಯಲ್ಲಿ ಅವಸರವಾಗಿ ಹೋಗುತ್ತಿರುವ ಒಬ್ಬನನ್ನು ಕುರಿತು]

ಅಪ್ಪಾ! ಸ್ವಲ್ಪ ಹೀಗೆ ಬನ್ನೀಂದ್ರೆ! ಒಂದು ನಿಮಿಷ, ಒಂದೇ ಒಂದು ನಿಮಿಷ ಬಂದು ಹೋಗೀಂದ್ರೆ!

ಬೀದಿಗ:—ಹೋಗ್ರಿ, ಹೋಗ್ರಿ! ನನಗವಸರದ ಕೆಲಸಾ ಇದೇ ಕಾಣ್ರೀ!

ಗಂ:—ಇದೂ ಅವಸರದ ಕೆಲಸಾನೇಪ್ಪಾ! ನಿಮಗೆ ಪುಣ್ಯ ಬರುತ್ತೆ ನೋಡಿ!

ಬೀದಿಗ:—ನಿಮ್ಮ ಪುಣ್ಯಾನೆಲ್ಲಾ ನೀವೇ ಇಟ್ಟುಕೊಂಡು ಉಪ್ಪಿನಕಾಯಿ ಹಾಕಿ ಕೂಳ್ರಿ. ಪುಣ್ಯವಂತೆ ಪುಣ್ಯ! ಮನೇಲಿ ಹೆಂಡತಿ ಸಾಯುತಾ ಬಿದ್ದಿದ್ದಾಳೆ. ಡಾಕ್ಟರ ಹತ್ತಿರ ಹೋಗ್ತಾ ಇದ್ದೀನೆ ಅವಸರವಾಗಿ, ಇವರ ತಗಾದೇ ಬೇರೇ ಇಲ್ಲಿ! ಬಿಟ್ರೀ ಚಾಕರೀಗೆ!

ಗಂ:—ನೋಡಿ! ನೀವು ನಮ್ಮ ವೆಂಕಟರಾಮಯ್ಯನವರ ಹಿರೀಮಗ ಅಲ್ಲವೆ?

ಬೀದಿಗ:—ಅವರಿಂದಾಗಬೇಕಾದ್ದೇನು?

ಗಂ:—ಅವರು ನೋಡಿ! ನಮಗೆ ಬಹಳ ಬೇಕಾದವ್ರು!

ಬೀದಿಗ:—ಅದಕ್ಕೇ ಅವರ ಭಾವಮೈದುನನ ಹತ್ತಿರ ಶೇಕಡ 24 ರಂತೆ ಬಡ್ಡಿ ತಕ್ಕೊಂಡ್ರಲ್ಲಾ!

ಗಂ:—ಛೀ! ಛೀ! ನೀವು ಯಾರನ್ನು ಹೇಳ್ತಾ ಇದ್ದೀರೋ? ಅದುಹೋಗಲಿ. ನೋಡಿ ಮನೇಲಿ ಯಾರೂ ಇಲ್ಲ. ಹಸು ಕರು ಕಳವಾಗಿಹೋಗಿದೆ. ಸ್ವಲ್ಪ ಪೋಲೀಸ್ ಸ್ಟೇಷನ್ನಿನಲ್ಲಿ..................

ಬೀದಿಗ:—ಹೋಗ್ರಿ, ಹೋಗ್ರಿ! ಮನೇಬೀಗ ಹಾಕ್ಕೊಂಡು ಹೋಗ್ರಿ-ಮನೇಲಿ ಯಾರು ಇಲ್ಲದೇ ಇದ್ರೆ! ಯಾರಿಗೆ, ಏನು ಕೆಲಸ, ಹೇಳಬಹುದು ಯಾವಾಗ ಹೇಳಬಹುದು, ಅನ್ನೋಪರಿಜ್ಞಾನವೇ ಇಲ್ಲವೋ ನಿಮಗೇ? ಅವತ್ತು "ಒಂದು ಇಪ್ಪತ್ತು ರೂಪಾಯಿದ್ರೆ ಕೊಟ್ಟಿರಿ ಭಟ್ರೆ! ಹುಡುಗನಿಗೆ ಪರೀಕ್ಷೇಗೆ ಹಣ ಕಟ್ಟಬೇಕೂಂತ ಗೋಗರಿದ್ರು" ನಮ್ಮ ತಂದೇವ್ರು ನಿಮ್ಮ ಹತ್ತರ. ಹಣದರಾಶೀ ಎದುರಿಗೇ ಕೂತ್ಕೊಂಡು "ಸಾಧ್ಯವಿಲ್ಲ" ಅಂದ್ರಿ. "ಸಾಲವಾಗಿ ಕೊಡಿ" ಭತ್ತ ಮಾರಿ ಕೊಟ್ಟುಬಿಡ್ತೀನೆ "ಅಂದ್ರು" ಸಾಧ್ಯವೇ ಇಲ್ಲ" ಅಂದ್ರಿ. ಈಗ....... .................

ಗಂ.—ಅಪ್ಪಾ! ಏನೋ ನೋಡಿ. ನಾನೂ ಗೋಪೂಜೆಮಾಡತಕ್ಕವನು.

ಬೀದಿಗ:—ಗೊತ್ತು, ಗೊತ್ತು ನಿಮ್ ಗೋಪೂಜೆ ಗೀಪೂಜೆ ಎಲ್ಲಾ. ನನ್ನಿಂದ ಸಾಧ್ಯವಿಲ್ಲ. ನಿಮ್ ಗೋಪೂಜೇನೋಡಿ! ಗೀಪೂಜೆನೋಡ್ರಿ! ಅವತ್ತೇನೋ ಸ್ಮಶಾನದಲ್ಲಿ ತಡಕಾಡತಾ ಇದ್ದಗಲ್ರೀ? ಅಸ್ಥಿರಾಶೀಲಿ! ದೊರಕಿತೇನ್ರಿ ಯೇನಾದರೂ ಪ್ರತಿಲ?

ಗಂ:—(ಸ್ವಗತ) ಎಲಾ ಇವನ! ಇವನೆಲ್ಲಿ ನೋಡಿದಾ ಅಪನ್ನಾಂತ? (ಪ್ರಕಾಶ) ಏನೋನೋಡಿ! ನಾನೂ ಕೈಲಾಗದವನು. ಏನೋ ದಯವಿಟ್ಟು......

ಬೀದಿಗ:—ದಯವೂ ಇಲ್ಲ, ಗಿಯವೂ ಇಲ್ಲ. ನನ್ನನ್ನು ಸುಮ್ಮನೆ ತೊಂದರೆ ಮಾಡಬೇಡ್ರಿ. ನನಗೆ ಕೆಲಸವಿದೆ, ಹೋಗಬೇಕು (ಎಂದುಕೊಂಡೇ ನಡೆದುಬಿಟ್ಟ.)

ಗಂ:—(ಸ್ವಗತ) ಅಲ್ಲ, ಇದೇನಿದು ಪ್ರಪಂಚಾಂತ! ಒಬ್ಬ ಮನುಷ್ಯನಾದರೂ ನಾನು ಹೇಳಿದಮಾತು ಕೇಳಬೇಡವೇಂತ? ಅಲ್ಲ, ನನಗೇನು ವಯಸ್ಸಾಗಲಿಲ್ಲವೆ? ಬುದ್ಧಿ ಸಾಲದೇ? ಹಾಂ! ಇದೇನನ್ಯಾಯಾಂತ! ಅಲ್ಲ, ದೊಡ್ಡವ್ರು, ಕಿರಿಯವ್ರು, ಅನ್ಯೋನ್ಯತ್ಯಾಸವೇ ಅಳಿಸಿಹೋಯಿತ್ತೇ ಅಪ್ರ? ಏನುಕಾಲ ಇದೂಂತ! ಅಲ್ಲ! ಇಷ್ಟುಹೊತ್ತು ಇಲ್ಲೀ ನಿಂತಿದ್ದ. ಮಾತಿಗೆ ಮಾತು ಜವಾಬು ಹೇಳ್ತಿದ್ದ! ಕಳೆದಕಾಲ ಅಷ್ಟಿಷ್ಟಲ್ಲ! ಬಾಯಿಗೆ ಬಂದದ್ದೆಲ್ಲಾ ಹರಟಿದ! ಅಲ್ಲ, ಹೋಗೋದಾರೀಲಿ- "ಗಂಗಾಧರಭಟ್ಟರದು ಹಸೂನೂ ಕರೂನೂ ಕಳವಾಗಿಹೋಗಿಬಿಟ್ಟಿದೆ ಯಂತೆ! ಹೋಗಿ ಸ್ವಲ್ಪ ಪತ್ತೆಮಾಡಿಕೊಡಿ. ಮುದುಕರು ಬಹಳ ಪೇಚಾಡ್ತಾ ಇದ್ದಾರೆ ಪಾಪ! ತ್ರಾಣವಿಲ್ಲ, ಅಲೀತಾ ಇದ್ದಾರೆ ಒಬ್ಬೊಂಟಿಗರಾಗಿ" ಅಂತ ಪೋಲೀಸಿನವರಿಗೆ ತಿಳಿಸಿದ್ರೆ-ಸುತ್ತುಕೋತಾಯಿತ್ತೆ ಪಾಪ ಇವನಿಗೆ? ಕರ್ಮಿಷ್ಠಮುಂಡೇದೇ! ಇವನು ನೆಗೆದುಬಿದ್ದೋಗ! ಕುಲ ಇಲ್ಲ, ಗೋತ್ರಾ ಇಲ್ಲ, ನೋಡೊಕ್ಕೋದ್ರೆ! ಸೇರಿಕ್ಕೊಂಡುಬಿಟ್ಟ ತಾನೂ ಹಿಯ್ಯಾಳಿಸೋವರ ಲಿಸ್ಟ್ (List) ಗೆ! ಅಪಸ್ಮಾರಮುಂಡೇದೆ! ಹೂಂ! ನಮಗೂ ಏನೋವಕ್ಕರಿಸಿಬಿಟ್ಟಿದೆ ಪ್ರಮಾದವಾಗಿ ಗ್ರಹಚಾರ! ಮನೆಗಾದ್ರೂ ಹೋಗಿ ಬಿದ್ದುಕೋತೇನೆ ಅತ್ತಲಾಗೆ!

(ಮನೆಗೆ ಹೋಗುವನು)

ದೃಶ್ಯ: ೧೫ ] [ ಸ್ಥಾನ: ಬೀದಿ.

(ಪ್ರವೇಶ: ಪುರುಷೋತ್ತಮ)

ಪುರು:—(ಸ್ವಗತ) ಇನ್ನಾಯಿತು ಈಶ್ವರನ ಬಾಳು ! ಅವನು ಬಿದ್ದುಹೋದ ! ಅವನ ಚಿಂತೆ ಕೊನೆ ಮಿತಿಯಿಲ್ಲದಂತಾಯಿತು ! ಸರಳ ಶಾರದೆಯು ಜಗತ್ತನ್ನು ತೊರೆದಳು ! ಈಶ್ವರನನ್ನು ಬಿಟ್ಟು ನಡೆದಳು. ಈಶ್ವರನ ಬಿ. ಎಲ್. ( B. L. ) ವ್ಯಾಸಂಗವೂ ಕನಸಾಯಿತು. ಶಾರದೆಯು ಕಟಾಕ್ಷವು ಈಶ್ವರನಿಗೆ ಆಳಿಯಿತು. ಹೂಂ ! ವಿಧಿ ! ಬಂದದ್ದನ್ನೆಲ್ಲಾ ಅನುಭವಿಸಲೇಬೇಕು. ಇದುವರೆಗೂ ತಂದೆಯು ಲೋಭಿಯ ಾದರೂ ಮಾವನಕಡೆಯ ಸಹಾಯವಾದರೂ ಇತ್ತು ಈಶ್ವರನಿಗೆ. ಈಗ ಅದೂ ಮಾಯವಾಯಿತು. ಇನ್ನು ನಾನು ಹೋಗಿ ಶಾರದೆಯ ಮರಣವಾರ್ತೆ ಯನ್ನು ಆ ಜಿಪುಣನಿಗೆ ತಿಳುಹಿಸಿಬಿಟ್ಟು ಶವಸಂಸ್ಕಾರಕ್ಕೆ ಹೋಗಬೇಕು. ಈಶ್ವರನನ್ನು ಈ ಸಮಯದಲ್ಲಿ ಒಬ್ಬೊಂಟಿಗನನ್ನಾಗಿ ಬಿಟ್ಟರೆ......... ಅನರ್ಥವಾದೀತು. ಅವನ ದುಃಖವು ಮಿತಿಮೀರಿಹೋಗಿದೆ. ಅಲ್ಲ ! ಸೊಸೆ ಸತ್ತರೂ ಈ ಮುದುಕನಿಗೆ ಬಂದು ನೋಡುವುದಕ್ಕೆ ಬೇಡವಾಗಿದೆ ಯಲ್ಲಾ ! ಇನ್ನಿವನೆಂತಹ ಮೃಗವಾಗಿರಬಹುದೂಂತ ! ಇದೇನು ವಿಚಿತ್ರಪ್ರಪಂಚ !

(ಪುರುಷೋತ್ತಮನು ಗಂಗಾಧರನ ಮನೆಗೆ ಬರುವನು. ಅಷ್ಟರಲ್ಲಿ)

(ಸ್ಥಾನ: ಗಂಗಾಧರನ ಮನೆ. ಗಂಗಾಧರನು ಏಕಾಂಗಿಯಾಗಿ ಕುಳಿತು)

ಗಂ:—(ಸ್ವಗತ) ಹಸೂಕರುವಿಗೆ ಏನು ವಿಲೇವಾರಿ ಮಾಡಲಪ್ಪಾ ದೇವರೆ ! ಹೋಗಿ ಹೋಗಿ ನನ್ನ ಹಸೂಕರೂಮೇಲೆ ಬಿತ್ತೇ ಈ ಚಂಡಾಲರಿಗೆ ಕಣ್ಣು ? ಉಸ್ಸಪ್ಪಾಡಿ ! ಸಾಕಾಗಿಹೋಗಿದೆ ! (ಹಾಸಿಗೆಯಲ್ಲಿ ಬಿದ್ದು ನರಳುವನು.)

(ಪ್ರವೇಶ ಪುರುಷೋತ್ತಮ್)

ಪು:—ಭಟ್ಟರೆ ! ಭಟ್ಟರೆ !

ಗಂ:—ಯಾರದು ?

ಪು:—ನಾನು ಭಟ್ಟರೆ! ಪುರುಷೋತ್ತಮು!

ಗಂ.—ಚಾಪ್ಪಾ ಪುರುಷೋತ್ತಮು! ಇದೇನು ಇಷ್ಟು ಹೊತ್ತಿನಲ್ಲಿ? ಬಹಳ ಅಪರೂಪ! ಅಂಹಾಗೆ ಪುರುಷೋತ್ತಮ್! ನಮ್ಮ ಹಸು ಕಳವಾಗಿ ಹೋಯಿತು ನೋಡು. ಜತೇಲಿ ಕರೂನೂ ಹೋಯಿತು! ಮನೇಲಿ ಯಾರೂ ಇಲ್ಲ. ಸ್ವಲ್ಪ ಪೋಲೀಸ್‌ಸ್ಟೇಷನ್ (Police station) ಗೆ ಹೋಗಿ ಕಂಪ್ಲೇಂಟ್ (Complaint) ಕೊಟ್ಟು ಬರಬೇಕಲ್ಲಾ! ಈಶ್ವರನೂ ಇಲ್ಲ, ಸಮಯಕ್ಕೆ ಸರಿಯಾಗಿ.

ಪು:—ಭಟ್ಟರೆ! ನಿಮ್ಮ ಹಸು ಕಳವಾದ್ರೆ ಹಾಳಾಗಿಹೋಗ್ಲಿ! ಯಾಗೇನು ನಷ್ಟ ಕೊಳ್ಳೆಹೋದದ್ದು?

ಗಂ:—ಏನೆಂದೆ? ಪುರುಷೋತ್ತಮ್! ಏನೆಂದೆ? ಬ್ರಾಹ್ಮಣನಾಗಿಹುಟ್ಟಿ ಗೋಮಾತೆ! ಕೃಷ್ಣ! ಕೃಷ್ಣ! ಕೃಷ್ಣ!

ಪು:—ಸಾಕು ನಿಲ್ಲಿಸಿರಿ! ನಿಮ್ಮ ಬ್ರಾಹ್ಮಣ್ಯಕ್ಕೆ ಬೆಂಕಿ ಬೀಳಲಿ. ಎಲ್ಲಾ ಬರೀ ಬೂಟಾಟಿಕೆ! ಇದು ಬೇರೆ ಕೇಡು ನಿಮಗೆ. ಹಸುವಂತೆ! ಕರುವಂತೆ! ಕಳುವಾಯಿತಂತೆ! ಪೋಲಿಸಂತೆ! ಕಂಪ್ಲೇಂಟಂತೆ! ಸಹಾಯವಂತೆ! ಹಸು ಕಳವಾದರೆ ಬಹಳ ಉತ್ತಮವಾಯಿತು. ದೇವರಿಗೆ ದಯಹುಟ್ಟಿತು ಹಸುಮೇಲೆ. ಯಾರಮನೇಲ್ಲಿಯಾದರೂ ಸುಖವಾಗಿರುತ್ತೆ ಪಾಪ! ಅಂತೂ ನಿಮ್ಮಗೋಳು ತಪ್ಪಿತೋ ಇಲ್ಲವೋ ಅದಕ್ಕೆ?

ಗಂ:—ಇನ್ನು ಮೂರು ತಿಂಗಳಾದ್ರೂ ಇದ್ದಿದ್ರೆ ಶಾರದೆ ಹೆರಿಗೇಕಾಲವಲ್ಲಿ ಹಾಲುಸಿಕ್ಕತಾ ಇತ್ತಲ್ಲಪ್ಪಾ! ಪುರುಷೋತ್ತಮ್!

ಪು:—ಶಾರದೇನ್ನ ಹುರಿದು ಬಾಯಲ್ಲಿ ಹಾಕಿಕೊಂಡ್ರಿ ಇರೋವರೆಗೂ. ಇನ್ನೀ ಉದಾರ ಬೇರೆ! ನಿಮ್ಮ ಅನಿಷ್ಟಬಾಳಿಗೆ!

ಗಂ:—ಪುರುಷೋತ್ತಮ್! ಇದೇನಿದು ಹಾಗಾದ್ರೆ? ಇದೆಲ್ಲಾ ಏನೂಂತ? ಈ ಅಧಿಕಪ್ರಸಂಗ!

ಪು:—ಸಾಕು ಮುಚ್ರಿ ಬಾಯನ್ನು! ಹಸುವಂತೆ ಹಸು! ಕರೂಗಿಷ್ಟು ಹಾಲು ಕೊಟ್ಟು ಬಾಳಿದ್ರೇನಿ? ನಿಮಗೆ ಹಸುಬೇರೆ ಉದ್ಧಾರಕ್ಕೆ?

ಗಂ:—ಇದೇನು ಪುರುಷೋತ್ತಮ್ ! ಇದೇನಪ್ಪಾ ಇದು ? ಇದೇನು ದುರಹಂಕಾರ ಅಂದೆ? ಇದೇನು ಅಪಶಬ್ದಗಳೊಂದೇ! ಇದೇನು ನಿನ್ನಲೇವಡೀಂದೆ! ಅಲ್ಲಾಪ್ಪಾ! ದೊಡ್ಡವರೂ........ಸಣ್ಣವರೂ........ಅಲ್ಲ ನಿನ್ನ ಹೆತ್ತವರಿಗೆ ಬುದ್ಧಿಯಿಲ್ಲವೇಂದೆ ?

ಪು:—ನಿಲ್ಲಿಸಿರಿ ನಿಮ್ ಹಾಳುಪುರಾಣಾನ್ನ! ಒಬ್ಬರಿಗೂ ಇಲ್ಲದಬುದ್ಧಿ ನಿಮ್ಮೊಬ್ಬರಿಗೆ ಇರೋದು! ದುರಹಂಕಾರವಂತೆ! ಅಪಶಬ್ದಗಳಂತೆ! ಲೇವಡಿಯಂತೆ! ದೊಡ್ಡತನವಂತೆ! ಎಲ್ಲಾದಕ್ಕೂ ಒಟ್ಟಿಗೆ ಬೆಂಕಿ ಬಿತ್ತು ಹೋಗ್ರಿ! ಅಲ್ಲ, ಸೊಸೆ ಸತ್ತು ಶವವಾಗಿ ಬಿದ್ದಿದ್ದಾಳೆ! ಮಗ ಬಿಕ್ಕಿ ಬಿಕ್ಕೀ ಅತ್ತು ಅವಲಕ್ಕಿ ಕಾಳಾಗಿ ಹೋಗಿದ್ದಾನೆ. ಹೇಳಿಬಿಟ್ಟು ಹೊಗೋಣಾಂತ ಇಲ್ಲಿ ಬಂದರೆ ಇವರಿಗೆ ಹಸುವಂತೆ, ಹಸು !

ಗಂ:—ಹೌದೆ ? ಶಾರದೇ ಸತ್ತಳೇ ?

ಪು:—ಹೌದಲ್ಲದೆ ಮತ್ತೇನೂಂತ ? ನಿಮ್‌ತಲೆ! ಹಣದರಾಶಿಮೇಲೆ ಕೂತುಕೊಂಡು ತೂಕಡಿಸ್ತಾ ಇರಿ ಇಲ್ಲಿ. ದೆವ್ವಕಾದಹಾಗೆ ಕಾಯ್ತಾ ಇರಿ ನಿಮ್ಮ ಹಾಳು ಹಣಾನಾ! ನಿಮ್ಮ ಕಾರ್ಪಣ್ಯ ನೆಗೆದುಬಿದ್ದುಹೋಗ! ನಿಮ್ಮ ಹಣ ಬೂದಿಯಾಗಿಹೋಗ! ರತ್ನದಂತಾ ಸೊಸೇನ್ನ ನುಂಗಿಕೊಂಡಿರಲ್ರೀ! ನಿಮಗೆ ಮಗ ಬೇರೆ! ಸೊಸೆ ಬೇರೆ! ನಡೀರಿ. ಶವ ಎತ್ತತಾ ಇದ್ದಾರೆ. ನಿಮಗಾಗಿ ಕಾದಿದ್ದಾರೆ.

ಗಂ:—(ಸ್ವಗತ) ಅಲ್ಲಾ ಯಾಕೆ ಇವೆಲ್ಲಾ ಹೀಗೆ ನೆಗೆದುಬಿದ್ದುಹೋಗುತ್ವೆ ಅಂತ ? ನನ್ನಾಡಬೇಕೂಂದ್ರೆ ಇವಕ್ಕೆಲ್ಲಾ ಹದ್ದು ಬದ್ದು ಇಲ್ಲದೇ ಹೋಯಿತಲ್ಲಾ! ಹೀಗೆಲ್ಲಾ ಆಗೋದ್ರೆ ನಾನು ಹ್ಯಾಗೆ ಬದುಕಿ ಹೆಸರು! ಹೇಳೋದೂಂತ ? (ಪ್ರಕಾಶ) ಪುರುಷೋತ್ತಮ್ ! ನೀನು ನಡಿಯಪ್ಪ! ಸುತರಾಂ ಕೈಲಾಗಲಿಲ್ಲ. ಸೊಂಟ ಬೇರೆ ಹಿಡಿದುಬಿಟ್ಟಿಗೆ. ನಡೆಯೋಕ್ಕಾಗೋಲ್ಲ. ಹಾಗೇ ಬೀಳೋಹಾಗಾಗತ್ತೆ. ಏನುಮಾಡಲೋ ದೇವರೆ !

ಪು:—ಇಷ್ಟವಿದ್ರೆ ಬನ್ನಿ ಕಷ್ಟವಾದ್ರೆ ಬಿಡ್ರಿ. ಯಾರಿಗೆಬೇಕಾಗಿದೆ ನಿಮ್ಮವೇಷ

(ಪುರುಷೋತ್ತಮನು ಹೋಗುವನು)

ಃ:—(ಸ್ವಗತ) ಹೂಂ! ನಾನು ಹೋಗ್ತೇನೆ. ಸತ್ತರೆಸಾಯ್ತಾಳೆ. ನಾನು ಮನೇಗಿನ್ನೇ ಬಿಟ್ಟು ಕದಲೋಲ್ಲ. ಇದೇ ಸರಿಯಾದ ಸಮಯಾಂತ ಯಾರಾವರೂ ಬಂದು ಕೊಳ್ಳೆಹೊಡೆದುಬಿಡ್ಲಿ ಆಮೇಲೆ! ನೆಟ್ಟಗಾಗುತ್ತೆ ನನ್ನ ವಿದ್ಯಮಾನಾಲ್ಲಾ! ಬೆಳಗಿನಿಂದ ಸತ್ತು ಸುಣ್ಣವಾಗಿದ್ದೇನೆ. ಹೆಣವಾಗಿಹೋದೆ! ನನ್ನ ಹಣ ಕಳವಾದರೆ ಇವರಿಗೆಲ್ಲಾ ಕೊಳ್ಳೆ ಹೋಗುತ್ತ್ಯೇನು ಕನಿಕರ?

ಸದ್ಯ ಹಾಸಿಗೇಲಿ ಬಿದ್ದುಕೊಂಡೇನೇಂತ ಆಗಿ ಹೋಗಿದೆ. ಇದರ ಮಧ್ಯೆ ಶಾರದೆ ಬೇರೆ ಸತ್ತಳಂತೆ! ಗ್ರಹಚಾರ! ಇನ್ನು ಅಲ್ಲಿಗೆ ಹೋಗೂದು. ಇನ್ನೇನಾದ್ರೂ ಒಕ್ಕರಿಸಿಬಿಡೋದು ಖರ್ಚಿಗೆ ದಾರಿ! ಅಷ್ಟಕ್ಕೂ ಶಾರದೇ ನನ್ನ ಮನೇಗೆ ತಂದ ಭಾಗ್ಯವೇನೋ ಕಾಣೆ! ನನ್ನ ಆಶೇಲ್ಲ ಕರಗಿಸಿ, ನೀರಿನಲ್ಲಿ ಚೆಲ್ಲಿಬಿಟ್ಟು ನಡೆದುಬಿಟ್ಲು ಆಚೀಗೆ! ಅವಳನ್ನು ನೋಡೋದೂ ಬೇಡ! ಗೀಡೋದೂ ಬೇಡ. ಹಾಗೂ ನಾಳೇ ಯಾರಾದ್ರೂ" ಎಲ್ಲಿ ಭಟ್ಟರೆ! ಸೊಸೆ ಸಂಸ್ಕಾರ ನಡೆಯೋವಾಗ ನಿಮ್ಮ ಮೊಖನೇ ಕಾಣಲಿಲ್ಲಾ" ಅಂತ ಕೇಳಿದ್ರೆ "ನೋಡಿ! ಸಣ್ಣ ಮಕ್ಕಳ ಸಾವು! ಕಣ್ಣಿನಲ್ಲಿ ನೋಡೋದೂ ಅಂದ್ರೆ, ಬೋ ಸಂಕಟ! ಬೋಸಂಕಟ! ಸಹಿಸೋಕಾಗೋಲ್ಲ. ದೂರದಿಂದಲೇ ಅನುಭವಿಸಿಬಿಡೋಣ ಅಂತ ತೀರ್ಮಾನ ಮಾಡಿಬಿಟ್ಟೆ" ಅಂದ್ರೆ ಸರಿಹೋಯಿತು. ಅಪ್ಪಾಡಿ! ಇನ್ನು ಬಿದ್ದುಕೋತೀನಪ್ಪಾ! ಸೋತು ಹೋಯಿತು ಕೈಕಾಲೆಲ್ಲಾ. (ಹಾಸಿಗೆಯಲ್ಲ ಬಿದ್ದು ಹೊರಳಾಡ್ತಾನೆ).

[ನಿಶಿರಾತ್ರಿ: ಎಲ್ಲಾ ನಿಶ್ಶಬ್ದ, ಒಬ್ಬೊಬ್ಬರು ಒಂದೊಂದು ಕತ್ತಿಯನ್ನು ಹಿಡಿದು ಡಕಾಯಿತಿಗಳ ಪ್ರವೇಶ]

ಗಂ:—(ಬೆಚ್ಚಿಬಿದ್ದು) ಇದೇನು ಸದ್ದು? ಯಾರು?

ಡಕಾ:—ನಾವು ಭಟ್ಟರೆ! ಒಬ್ಬರೇ ಇದ್ದೀರಾ ಪಾಪ!

ಗಂ:—ಡಕಾಯಿತಿಗಳನ್ನು ನೋಡಿ (ಘಾಬರಿಯಿಂದ) ಹಾಂ! ಅಯ್ಯೋ!

ಡ:—ಸದ್ದು ! (ಬಾಯಿಗೆ ಬಟ್ಟೆ ತುರುಕಿ, ಕೈಕಾಲುಗಳನ್ನು ಕಟ್ಟಿಹಾಕಿ- ಅಲ್ಲಿದ್ದ ಮೇಜಿಗೆ ಅವನನ್ನು ಬಿಗಿದು ಹಾಕುವರು ಅವನೆದೆಗೆ ಕತ್ತಿ ಯನ್ನು ಹಿಡಿದು) ಮುಚ್ಚು ಬಾಯ್ ! ಒಂದಕ್ಷರ ಹೊರ ಹೊಂಟೀತು! ಗಲಭೆ ಮಾಡಿದರೆ ನಿನ್ನನ್ನು ಇಲ್ಲಿಯೇ ತುಂಡು ತುಂಡಾಗಿ ಕತ್ತರಿಸಿ ಹಾಕಿ ಹೊತುಬಿಡುತ್ತೇವೆ ! ಹುಷಾರ್ ! ಹೊಂ ! ನಿನ್ನ ಒಡವೆ, ಗಿಡವೆ, ಹಣ, ಗಿಣ, ಪತ್ರ, ಪರದೇಶಿ, ಎಲ್ಲಾ ಬಂದು ಬೀಳಲಿ. ಹೊಂ !

ಡ 1 :—ಅವನನ್ನು ಇನ್ನೂ ಚೆನ್ನಾಗಿ ಕಟ್ಟಿಹಾಕಿ. ನರಳಲಿ. ನಾವೇ ಎತ್ತಿ ಕೊಳ್ಳೋಣ ಅವನ ಸಹಾಯವೇ ಅನಾವಶ್ಯ.

ಡ 2 :—ಬಿಡಿಬಿಡಿಯಾಗಿ ಕೊಳ್ಳೆ ಹೊಡೀಬೇಕು. ಜಿಪುಣನ ಎದೆ ತುಂಡು ತುಂಡಾಗಿ ಒಡೆದು ಹೋಗಲಿ.

ಡ 3 :—ಇವನನ್ನು ಇಲ್ಲಿಯೇ ನೇಣು ಹಾಕಿದರೋ ?

ಡ 4 :—ಛೇ ! ಛೇ ! ಆಗವನು ನರಳಿದಹಾಗಾಗೋಲ್ಲ. ಇಂಥ ಕಟುಕರು- ನಿಧಾನವಾಗಿ ನರಳಬೇಕು. ನರಳಿ, ನರಳಿ, ನಿಧಾನವಾಗಿ ಸಾಯಬೇಕು. (ಡಕಾಯಿತಿಗಳು ಗಂಗಾಧರನ ವಿಶಿಷ್ಟ ನಗೆನಟ್ಟು, ಹಣಕಾಸು, ಎಲ್ಲ ವನ್ನೂ ಮೂಟೆಕಟ್ಟಿ-ಅವನ ಸಾಲಪತ್ರಗಳು, ಕೋರ್ಟು ರಿಕಾರ್ಡುಗಳು ಎಲ್ಲವನ್ನೂ ತುಂಡು ತುಂಡಾಗಿ ಹರಿದು–ಅವನೆದುರಿಗೆ ರಾಶಿ ಕೂಡಿಸಿ ಬೆಂಕಿ ಇಟ್ಟು ಸುಟ್ಟುಬಿಟ್ಟರು. ತರುವಾಯ ಕೊಳ್ಳೆ ಹೊಡೆದುದನ್ನು ಹೊತ್ತುಕೊಂಡು ಡಕಾಯಿತಿಗಳಲ್ಲಿ ಮುಖಂಡನಾದವನು ಗಂಗಾಧರ ನನ್ನು ಕುರಿತು)

ಡ:—ಹೇಯ್ ! ಜಿಪುಣ ಗಂಗಾಧರ ! ನಮ್ಮ ಕೆಲಸವು ಮುಗಿಯಿತು. ನಿನ್ನ ಪರಿಣಾಮವೂ ಆಯಿತು. ಹೊಂ ! ನಾವು ಹೊರಡುತ್ತೇವೆ ಇನ್ನು. ಬಹಳ ಹೊತ್ತಾಯಿತು. (ಒಂದು ಸವಕಲು ಕಾಲಾಣೆಯನ್ನು ಗಂಗಾ ಧರನ ಕಡೆಗೆ ಎಸೆದು) ಇಂದಾ ! ಈ ಸವಕಲು ಕಾಲಾಣೆ ಕೂಡ ಆಪತ್ತಿಗೆ ಒದಗುತ್ತೇಂತ ಸೇರಿಸಿ ಇಟ್ಟಿದ್ದೆಯಲ್ಲವೆ ? ತಕೋ ಪಾಪ ! ಅದನ್ನೂ ಇಲ್ಲಾಂತ ಯಾಕೆ ಹೇಳೋದು ! ಇಟ್ಕೊಂಡಿರು ಭದ್ರವಾಗಿ. ಒಂದು ಸಮಯ ವಿಷ ಗಿಷ ಬೇಕಾದ್ರೆ ತಕ್ಕೊಳ್ತೀಯಂತೆ ! ವಿಷಕ್ಕೂ

ಸಮಯದಲ್ಲಿ ಕಾಲಾಣೆ ಇಲ್ಲ ಅಂದ್ರೆ ಅದು ಬಹಳ ನಾಚಿಕೆಗೇಡು ನೋಡು! ಯಾರು ಕೊಡ್ತಾರೆ ಆ ಕಾಲಾಣೆನಾದ್ರೂ ನಿನಗೆ? ನೀನು ಯಾರಿಗಾದ್ರೂ ಕೊಟ್ಟಿದ್ರಲ್ಲವೆ ಅವರು ನಿನಗೆ ಕೊಡೋದಕ್ಕೆ? ಹೋಗಲಿ. ಎಲ್ಲಾ ಹೋಯಿತೂ ಅಂತ ಸುಮ್ಮನೆ ಚಿಂತೆಪಟ್ಟುಕೋ ಬೇಡ. ಚಿಂತೆ ಬೋ ಕೆಟ್ಟವ್ಯಾಧಿ ನೋಡು. ಕೊರಗಿಸಿ ಕೃಶಾಮಾಡಿ ಹಾಕಿಬಿಡುತ್ತೆ ಮನುಷ್ಯನ್ನಾ! ಹುಚ್ಚುಹಿಡಿಸಿಬಿಡುತ್ತೆ.

ಒಂದು ವಿಷಯ ಮಟ್ಟಿಗೆ ಸ್ಪಷ್ಟವಾಗಿ ತಿಳುಕೋ! ಎಷ್ಟೋ ಜನರ ಕೈಮಾರಿ, ಅವರ ಮನೆ ತೀರ ಹಾಳಾಗಿಹೋಗಿ, ಇಷ್ಟು ಹಣ ನಿನ್ನ ಕೈ ಸೇರಿತು. ನೀನೂ ಬಹಳ ಶ್ರಮಪಟ್ಟಿದ್ದೀಯಾ ಪಾಪ! ಒಪ್ಪುಕೋಬೇ ಕಾದ್ದೇ. ಆದರೇನು ಮಾಡೋದು? ದೇವರ ದಯ ತಪ್ಪಿತು. ನಿನ್ನ ಕೈ ಬಿಟ್ಟಿತು. ನಮ್ಮ ಕೈಗೆ ಬಂತು. ಹಣ ಅನ್ನೋದು ಅಸ್ಥಿರನೋಡು. ಸುಮ್ಮನೆ ಕೊರಗಬೇಡ. ಬುದ್ಧಿ ಕೆಟ್ಟುಹೋಗುತ್ತೆ. ಹಣ ಅಂದ್ರೆ ಅದೊಂದು ಚಲನಚಿತ್ರ ನೋಡು! ಸುಮ್ಮನೆ ಭ್ರಮೆ ಪಟ್ಟುಕೋಬೇಡ. ಭಯಗಿಯ ಬೇಡ, ಭ್ರಾಂತಿಯನ್ನು ಬಿಡು! ದುಡ್ಡಿರೋವರೆಗೇ ಭಯ, ಭ್ರಾಂತಿ, ಎಲ್ಲಾ. ಅಷ್ಟೇ ನೋಡು ತಿಳೀತೇ?

ಇನ್ನು ನಾವು ಹೊರಡುತ್ತೇವೆ. ನಮ್ಮನ್ನು ಮರಿಯಬೇಡ! ಬರುವ ಜನ್ಮದಲ್ಲಾದರೂ ಒಂದು ಪಕ್ಷ ಸಾಧನೆ ಮಾಡು. ನಮ್ಮ ಪರಿಚಯ ವೇನೋ ಬಹಳ ಅಲ್ಪ! ಆದರೂ ಬಹುಕಾಲ ಜ್ಞಾಪಕವಿರತಕ್ಕದ್ದು ಇನ್ನು ಸದ್ದುಗಿದ್ದು ಮಾಡದೆ ಬಿದ್ದುಕೋ! ಕೂಗಾಟಗೀಗಾಟಕೂಡದು ಪುಕಾರುಗಿಕಾರು ಪ್ರಯೋಜನವಿಲ್ಲ. ಹಾಗೂ ಕೂಗಿಕೊಳ್ಳುವುದಕ್ಕೆ ಪ್ರಯತ್ನಮಾಡಿದರೆ ನಿನ್ನ ಬೆನ್ನಹಿಂದೆಯೇ ಇದ್ದಾರೆ ನೋಡಿಕೋ. ತಕ್ಷಣ ತಿವಿದುಹಾಕ್ತಾರೆ. ಅಂದಹಾಗೆ ಕೊಳ್ಳೆ ಕಲಸದಲ್ಲಿ ನಿನಗೂ ತಕ್ಕಮಟ್ಟಿಗೆ ಅನುಭವವಿದೆ. ಹೇಗಾದ್ರೂ ಇರಲಿ. ಕೂಗಾಡೋದಕ್ಕೆ ಯತ್ನಿಸಿ ಅನ್ಯಾಯವಾಗಿ ಪ್ರಾಣ ಕಳಕೋಬೇಡ. ಇದನ್ನೆಲ್ಲಾ ಕುರಿತು ಯೋಚಿಸೋದಿಕ್ಕಾದರೂ ನಾಲ್ಕು ದಿವಸ ಅವಕಾಶ ಬೇಕಲ್ಲಾ!

ಹೇ! ಜಿಪುಣ ಗಂಗಾಧರ! ಈಗ ಸ್ವಸ್ಥವಾಗಿ ಬಿದ್ದುಕೋ. ಸ್ವಲ್ಪ ಸ್ವಲ್ಪವಾಗಿ ನರಳು. ತಿಳಿಯಿತೇ? ಬೆಳಗ್ಗೆ ಏಳು. ಹೇಗೂ ಸೊಸೆ

ಬೇರೆ ಸತ್ತಿದ್ದಾಳೆ ಹೊಳೆಗೆ ಹೋಗು. ಸ್ನಾನಮಾಡು. ನ್ಯೆಗೆ ಮನಸ್ಸಿಗೆ ಅಂಟಿರೋ ಎಲ್ಲಾ ಕಶ್ಮಲಾನೂ ತೊಳಕೋ. ದೇವಸ್ಥಾನಕ್ಕೆ ಹೋಗು. ದೇವರ ಮುಂದೆ ನಿಲ್ಲು. ಪ್ರಾರ್ಥನೆಮಾಡ್ಕೋ. "ದೇವರೇ! ಎಲ್ಲಾ ಜೆಫ್ತಣರಿಗೂ ಇದೇ ರೀತೀಲ್ಲೇ ಆಗಿಂದಾಗ್ಗೆ ಡಕಾಯಿತಿಗಳ ದರ್ಶನವಾಗತಾ ಇರಲಪ್ಪಾ" ಅಂತ. ತಿಳೀತೇ? ಭದ್ರ! ಎಚ್ಚರಿಕೆ! ಹುಷಾರ್!

(ಡಕಾಯಿತಿಗಳು ಕೊಳ್ಳಿಯೊಂದಿಗೆ ಹೋಗುವರು)

ದೃಶ್ಯ ೧೬] [ಸ್ಥಾನ: ಬೀದಿ

(ಪಾತ್ರಗಳು: ಬೀದಿಹೋಕರು, ಹುಡುಗರು, ಹುಚ್ಚುಹಿಡಿದ ಗಂಗಾಧರ)

ಹುಡುಗರು:—ಲೋ ಗಂಗಾಧರನಿಗೆ ಹುಚ್ಚುಹಿಡಿಯುತಂತಲ್ರೋ?

1 :—ಅವನು ಹಾಳಾದ! ಅವತ್ತು ಮದುವೇಲಿ ನನ್ನ ದಕ್ಷಿಣೆಕಾಸು ಕೆಳಕ್ಕೆ ಬಿತ್ತು. ಅದನ್ನೆತ್ತಿ ಸೊಂಟದಲ್ಲಿ ಸಿಕ್ಕಿಸಿಕ್ಕೊಂಡ! ಕೇಳಿದ್ರೆ ಸಿಂದಲ್ಲ ಹೋಗೂಂತ ಗದರಿಸಿದ.

2 :—ಅವತ್ತು ನನ್ನನ್ನ ಅಂಗಡೀಗೆ ಕಳುಹಿಸಿದ. ಸಾಮಾನು ತೆಗೆದಿಟ್ಟಿದ್ದೀನಿ ತಕ್ಕೊಂಡು ಬಾ ಅಂದ. ನನಿಗೆ ಅರ್ಧಾಣೆ ಕೊಡ್ತೀನಿ ಅಂತ ಹೇಳಿದ. ಮೋಸ ಮಾಡಿದ. ಇವನ ದೆಸೆಯಿಂದ ಸ್ಕೂಲಿಗೆ ಲೇಟಾಯಿತು. ಬೆಂಚ್‌ಮೇಲೆ ನಿಲ್ಲಿಸಿದ್ರು ಮೇಷ್ಟ್ರು.

3 :—ಲೋ ಸುಮ್ಮನಿರ್ರೋ! ಬಂದುಗಿಂದುಬಿಟ್ಟಾನು ಆಮೇಲೆ. ಅವನು ಸಾಧಾರಣ ಹುಚ್ಚನಲ್ಲಕಾಣೋ. ಯಾತರಾಗಂದ್ರೆ ಅದರಲ್ಲಿ ಬಾರಿಸಿಬಿಡ್ತಾನೇ ಕೋಪ ಬಂದ್ರೆ.

4 :—ನಮ್ಮ ಕೈ ಮಣೇ ಪೋಣಿಸ್ತಾ ಇದೆಯೇನೋ ಇವನು ಬಾರಿಸಿದ್ರೆ!

1 :—ಆ ಗುಂಡೂರಾಯರು ಇವನಿಂದಲೇ ಅಲ್ವೇನೋ ಸತ್ತಿದ್ದು?

2 :— ಈಗ ಯಾತಕ್ಕೋ ಅದರ ಮಾತು?

1 :— ಅಲ್ಲ, ತಿಳಿದಿದ್ದು ಹೇಳಬಾರದೇನೋ?

[ಪ್ರವೇಶ: ಹುಚ್ಚು ಗಂಗಾಧರ]

ಗಂ: – ಅಯ್ಯೋ! ಅಪ್ಪಾ! ಹೋಯಿತಲ್ಲೋ! ಹಣ ಹೋಯಿತಲ್ಲೋ! ಹಸು ಹೋಯಿತಲ್ಲೋ! ತಲೆ ಕೆಟ್ಟು ಹೋಯಿತಲ್ಲೋ! ಲೋ ಶ್ಯಾಮು! ತಿರುಪತಿ ಬಾಕಿ ಕೊಡೋ! ಲೋ ಈಶ್ವರ! ಅಹಹಹ! ನನ್ನ ಹಣ ಎಲ್ರೀ! ನರಹರಿಶಾಸ್ತ್ರಿಗಳೇ!

1 :—ಭಟ್ಟರೆ! ಭಟ್ಟರೆ! ನಿಮ್ಮಬಾಳಿಗೆ ಬೆಂಕಿ ಬೀಳಲಿ.

ಗಂ:—ಏ! ನನ್ನ ಹಣಾ ಕೊಡೋ ಕೊಳ್ಳೇಗಾರ! ಲೋ ಈಶ್ವರ! ಅವನನ್ನು ಹಿಡಿದುಕೊಂಡು ಬಾರೋ! ಶಾರದೇ! ನಿಮ್ಮಪ್ಪನ್ನ ಕೇಳಿ ಮುನ್ನೂರು ರೂಪಾಯಿ ಈಸುಕೊಂಡು ಬಾರೇ! ಲೋ ಪುರುಷೋತ್ತಮ! ಯಾಕೋ ನೀನು! ಈಶ್ವರ!

2 :— ಶಾರದೇ ಸತ್ತುಹೋದಳೋ.. ......ಜಪ್ಪುಣ!

ಗಂ:—ಶಾರದೆ ಸತ್ತಳು. ನಾನೂ ಸತ್ತೆ. ಹಾಂ! ಹಾಂ! ಲೋ ಕೊಳ್ಳೇಗಾರ! ಕೊಳ್ಳೇಗಾರ! ಇರೋ ನಾನೂ ಬರ್ತೀನಿ–ನಿಮಗೆಲ್ಲಾ ಎಣಿಸಿ ಕೊಡ್ತೀನಿ ಹಣಾನ! ಹೂಂ! ಹಾಂ!

3 :—ಲೋ ಮುದುಕ! ಇಂದಾರೋ ಹಣ! ನಿನ್ನ ಜೊಂತೆ ಹಿಡಿಯೋ.

ಗಂ:—ಹಾಂ! ಹಣ! ತಾ! ಹಣ!

1 ಪು:—(ಅವನ ಕೈಯ್ಯಲ್ಲಿ ಸಗಣಿ ಹಾಕುವನು.)

ಗಂ:—ಹಾಂ! ನಮ್ಮನೇ ಹಸೂದು ಸಗಣಿ! ಯಾರೋ ಕದ್ದವರು ಹಸೂನ! ಹಾಂ! ಕಳ್ಳಸಿಕ್ಕ! ಪೋಲೀಸ್! ಕಳ್ಳಸಿಕ್ಕ (ಸಗಣಿಯನ್ನು ನೋಡಿ) ಗೋಮೇಧ್ಯ! ಪುಣ್ಯಬರುತ್ತೆ! (ಸಗಣಿಯನ್ನು ಮುಖಕ್ಕೆ ಹಚ್ಚಿ ಕೊಳ್ಳುವನು).

4 ಹು:—ಇಂದಾರೋ ಗಂಗಾಧರ ಹಣ! ಇಂದಾರೋ. ಕೊಳ್ಳೆಗಾರರು ಕೊಟ್ಟಿದ್ದಾರೆ.

ಗಂ:—ಎಲ್ಲಿ? ಎಲ್ಲೋ ಹಣ! ತಾ! ಒಡ್ಡಿ! (ಕೈ ಒಡ್ಡುವನು). (ಹುಡುಗನು ಕೈತುಂಬ ಕಲ್ಲುಗಳನ್ನು ಹಾಕುವನು) (ಗಂಗಾಧರನು ಕೋಪ

ದಿಂದ ಹುಡುಗ ಮೇಲೆ ಕಲ್ಲೆಸೆಯುವನು. ಘಾಬರಿಯಿಂದ ಹುಡುಗರು ಓಡುವರು. ಅನಂತರ ಗಂಗಾಧರನು ಹುಚ್ಚಿನ ಆವೇಶವು ಹೆಚ್ಚಿ ಹೊಳೆಯಲ್ಲಿ ಬಿದ್ದು ಸಾಯುವನು. ಪ್ರೇತವು ಅನಾಥವಾಗಿ ಹಸಿದ್ದ ಕಾಗೆಗಳು ಕಿತ್ತುಕೊಂಡು ತಿನ್ನುವುವು.)

ದೃಶ್ಯ ೧೭ ] [ ಸ್ಥಾನ: ಬೀದಿ.

[ಪ್ರವೇಶ ಮುದ್ದ]

ಮುದ್ದ:—(ಸ್ವಗತ) ಎಲ್ಲಾ ವುಗೀತು. ಇನ್ನೇನೈತೇಂತ? ಮುಗಿದೋಗ್ಬುಡ್ತು. ನಮ್ಮಪ್ಪನಿಗೆ ಬರಬೇಡದ ಗತಿ ಬತ್ತು. ಇದ್ದಬದ್ದದ್ದನ್ನೆಲ್ಲಾ ಸದ್ದುಮಾಡದೇ ಕೊಂಡೋಗ್ಬುಟ್ರು ಕೊಳ್ಳೇಗಾರರು! ಇಡಿದ ಕಸ್ಟ ಆಕಿದ್ರೂ. ಉಚ್ಚು ಇಡಿದು ಬೀದಿ ಬೀದೀಲ್ ಅಲ್ದ. ನನ್ನಾ ಕಳ್ದ ಆವತ್ತು "ಮುದ್ದಾ ಮೂರುಕಾಸಿದ್ರೆ! ಕೊಡೂ"ಂತ. ಒಳೀಗೋದ. ಮುಳುಕ್ಕೊಂಡ. ಶವಕ್ಕೆ ದಿಕ್ಕಿಲ್ಲದಂತಾಯ್ತು. ಅದ್ನೂ ಕಾಗೆ ಕಿತ್ಕೊಂದು ತಿಂದುಬುಟ್ಟುವು ಇವನ ದ್ರೇಗಾನಾ! ಸರಿ ಬುಡಿ. ಇವನ ಅವತಾರ ಪೂರೈಸೋಯ್ತು! ನೆಗೆದುಬಿದ್ದೋದ. ಒಂದು ವರಸಾ ಆಯ್ತು. ಮೇಲೆಂಟು ದಿನವೂ ಆಯ್ತು. ಕೊಂಡೋದ್ದೇನಪ್ಪ? ಓಗೋವಾಗ ನೆಟ್ಟಿಗೆ ಬಟ್ಟೇನೂ ಇಲ್ಲ ಮೈಮೇಲೆ! ಏಳದೇ ಕೇಳದೇ ಒಂಟುಬುಟ್ಟ! ಕಾಲ ಬತ್ತು. ಕತೇ ಮುಗೀತು!

ಹಾಂ! ಇಂಗಿರಬೇಕಾದ್ರೆ ಪ್ರಪಂಚದಾಗೇ ಒಡಕೋತಾರೆ—ಅಣ! ಅಣ! ಅಣ! ಅಣಾಂತ! ಅಣ! ಅಣ! ಅಣಕ್ಕಾಗಿ ಏನು ಮಾಡೋಕೂ ಸಿದ್ಧ! ಈ ಜಿಪುಣ ಮುಂಡೇವು! ಉಚ್ಚು ಇಡಿದಾಗ್ಲೂ "ಇಂದಾ ಅಣ" ಅಂತ ಲೇವಡಿ ಮಾಡಿದ್ರಲ್ಲಾ "ಹಾಂ" ಅಂತ ಕೈ ಒಡ್ಡಿದ ನಮ್ಮಪ್ಪ! ಉಚ್ಚು! ಉಚ್ಚು! ಅಣದ ಉಚ್ಚು! ಉಟ್ಟಿದಾಗ್ನಿಂದ ಸಾಯೋಗಂಟ ಒಂದೇ ಉಚ್ಚುವ್ರೋ! "ಬೇಡಿ ನಮ್ಮವ್ನೋರಾ! ಜಿಪುಣತನ ಬೇಡಿ. ದೇವರು ಕೊಟ್ಟವ್ನೆ. ಇಲ್ಲದೋರಿಗೆ ಒಸೀ ಕೊಟ್ಟ ಕನಿಕರ ತೋರಿ. ಕಟುಕರಂಗಿರಬೇಡದೂ—ಮೋಸಮಾಡಬೇಡದೂ, ದೇವರೊಪ್ಪೋಕಿಲ್ಲ. ಇವೆಲ್ಲಾ ಜೀವಕೊಳ್ಳೇದಲ್ಲ, ಆತ್ಮ ಕೆಟ್ಟೋಯ್ತದೆ!" ಅಂತಂದೆ. ಬಾರಿಬಾರಿಗೂ ಬಡಕೊಂಡೆ. ಕೇಳಿದ್ರಾ ಉಹುಂ! ಕೇಳಿಬಂದ ಕರ್ಮ!

ತಕ್ಕೋಳೋಕೆ ಪುಣ್ಯ ಬೇಕು. ಒಪ್ಕೋತೀನಿ. ನನ್ನೊಡೆಯಾ! ಆದರೆ ಕೊಡೋದ್ಕೆ ಅದ್ಕಿಂತ ಎಚ್ಚಿನ ಪುಣ್ಯ ಬೇಕಪ್ಪೋ! ಸುಮ್ಕೆ ಆಗನಿಲ್ಲ. ಅದ್ಕೇ ಏಳ್ತಾರಲ್ವಾ? ಕೊಟ್ಟಿಟ್ಟದ್ರೆ ಬತ್ತೈತೆ. ಕೊಟ್ಟಿಟ್ಟದ್ರೆ ಬತ್ತೈತೇಂತ. ದಾನದರ್ಮ ಮಾಡಬೇಕು. ಮೋಸಗೀಸಾ ಮಾಡಬೇಡದು. ನಾಕುದಿನ ಬಾಳಿದ್ರೂ ಮಾನವಾಗಿ ಬಾಳಬೇಕಪ್ಪೋ! ನಾನೇನೊ ಆಂಗಂತಾ ತಿಳಿಕೊಂಡೀವ್ನಿ. ಬೇಕಾದೋರು ತಿಳುಕೋಬೋದು. ಬೇಡದೋರ್ರು ಬುಟ್ಬುಬುಡಬೋದು.

ಆದ್ರೆ ಒಂದು ಮಾತು ಮಟ್ಟಿಗೆ ದಿಟಕಾಣಪ್ಪೋ! ಅಣಾ ಅನ್ನೋದು ಯಾರಿಗೂ ಸಾಸ್ವತ ಅಲ್ಲ. ಅಣಕ್ಕಾಗಿ ಗುಣ ಬುಟ್ಬುಬುಡಬಾರದು. ಯಾವ್ರದೆಂಗಾರ ಇರಲಿ. ಗಂಗಾಧರನಂಗೇ ನಮಗೂ ಆದ್ರೆ ಎಂಗೇಂತ ಮಟ್ಟಿಗೆ ಯಾರೂ ಮರಿಯೋಕಾಗಾಕಿಲ್ಲ.

ಇವತ್ತು ಈಸ್ವರಪ್ಪನೋರಿಗೂ ಕಮಲವ್ವನಿಗೂ ಮದುವೆ. ಅಂಗೇ ಸುಂದರವ್ವನಿಗೂ ಪುರುಸೋತ್ತಮಪ್ಪನೋರಿಗೂ ಮದುವೆ. ನಾನೂ ಓಗಬೇಕು. ಒತ್ತಾಯಿತು.

ದೃಶ್ಯ ೧೮ ] [ ಸ್ಥಾನ: ವಿವಾಹ ಮಂಟಪ.

[ಪಾತ್ರಗಳು: ಈಶ್ವರ, ಕಮಲು, ಪುರುಷೋತ್ತಮ, ಸುಂದರಿ, ಶ್ಯಾಮರಾಯ, ಪುರೋಹಿತರು ಮುದ್ದ–ನೆರೆದಿರುವ ಜನರು.]

ಶ್ಯಾ:—ಮಗೂ! ಈಶ್ವರ! ಇಂದು ನಿನ್ನ ತಾಯಿಯ ಮಾತನ್ನು ನೀನು ನೆರವೇರಿಸುವೆ. ಆಕೆಯ ಆತ್ಮಕ್ಕೆ ಈಗಲೀಗ ಶಾಂತಿಯು ದೊರೆತಂತಾಯಿತು.

ಈ:—ಮಾವಾ! ಎಲ್ಲಾ ಪರಮಾತ್ಮನ ಕೃಪೆ! ತಾಯಿಯ ಆಶೀರ್ವಾದ! ನಿನ್ನ ಪ್ರೀತಿ!

**ಶ್ಯಾ:**—ಬಹಳ ಸಂತೋಷ! (ಪುರುಷೋತ್ತಮನನ್ನು ನೋಡಿ) ತಾಯಿತಂದೆಯಿಲ್ಲದ ಈ ಸುಂದರಿಯನ್ನು ನಿನಗೊಪ್ಪಿಸುತ್ತೇನೆ. ಈ ಕಂದನನ್ನು ನೀನು ಮಮತೆಯಿಂದ ಕಾಪಾಡಬೇಕಪ್ಪಾ, ಪುರುಷೋತ್ತಮ್!

ಪು:—ಶ್ಯಾಮರಾಯರೇ! ಎಲ್ಲಾ ಜಗದೀಶ್ವರನ ಸಂಕಲ್ಪದಂತೆ ನಡೆಯಲಿ.

**ಶ್ಯಾ:**—ಸರಿ! ಸರಿ! ಮಂಗಳವಾದ್ಯವಾಗಲಿ. ಪುರೋಹಿತರೆ! ಧಾರಮಹೋತ್ಸವವು ನಡೆಯಲಿ.

॥ ಮಂಗಳಂ ॥

# ಸೂಚನೆ

ಈ ನಾಟಕದ ಪ್ರಕಟನೆ, ಅಭಿನಯ ಮತ್ತು ಚಲನ ಚಿತ್ರ ತಯಾರಿಕೆಯ ವಿಶಿಷ್ಟ ಹಕ್ಕುಗಳೂ ಗ್ರಂಥಕರ್ತರಿಗೇ ಸೇರಿದುವೆಂದು ತಿಳಿಯತಕ್ಕದ್ದು.

**ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ. ಎ.,**

ಗ್ರಂಥಕರ್ತ, ನಂ. ೧೨, ಆಂಡರ್ ಸನ್ ಸ್ಟ್ರೀಟ್,

ಜಾರ್ಜ್‌ಟವನ್, ಮದರಾಸ್.

---

**ಪುಸ್ತಕಗಳು ದೊರೆಯುವ ಸ್ಥಳ :—**

ಯಂ. ವಿ. ಶೇಷಾದ್ರಿ ಅಂಡ್ ಕಂಪೆನಿ, ಬಳೇಪೇಟೆ, ಬೆಂಗಳೂರು ಸಿಟಿ.

---

ರಾಜಗೋಪಾಲ್ ಫೋಟೋ ಜಿಂಕೋ ಪ್ರಿಂಟಿಂಗ್ ವರ್ಕ್ಸ್,

ಕೋಟೆ, ಬೆಂಗಳೂರು ಸಿಟಿ

ಇವರಿಂದ ಮುದ್ರಿತವಾದದ್ದು.